ಮಿಂಚಿನ ಬಳ್ಳಿ

ಸಂಪಾದಕ :-
ಬುರ್ಲಿ ಬಿಂದುಮಾಧವ

# ಹಾಸ್ಯ ಪ್ರಬಂಧಗಳು

ಅರ್ಥಾತ್

# ರಾಯರ ಲಲಿತ ಸಾಹಿತ್ಯ

**ಮಿಂಚಿನಬಳ್ಳಿಯ ಬಿಡಿಕುಡಿ**

# ಹಾಸ್ಯ ಪ್ರಬಂಧಗಳು

ಅರ್ಥಾತ್

## ರಾಯರ ಲಲಿತ ಸಾಹಿತ್ಯ

ಲೇಖಕರು

ದಿ. ಕೌಜಲಗಿ ಹಣಮಂತರಾಯರು



ಜುಲೈ ೧, ೧೯೫೧



ಬೆಲೆ :

ಸಾದಾ ಪ್ರತಿ




ಉತ್ತಮ ಪ್ರತಿ



ಮಿಂಚಿನಬಳ್ಳಿಯ ೧೩ನೇ ವರ್ಷದ

೪ನೆಯ ಕುಡಿ

# ಪಶ್ಚಿಮದ ಪ್ರತಿಭೆ

ಭಾಗ ೨

ಲೇ: ಗೌರೀಶ ಕಾಯ್ಕಿಣಿ

ಅಗಸ್ಟ ೧೫ಕ್ಕೆ ಪ್ರಕಟವಾಗುವದು

## ಮಿಂಚಿನಬಳ್ಳಿಗೆ ಚಂದಾದಾರರಾಗಿರಿ

ವಾರ್ಷಿಕ ಚಂದಾ

ಸಾದಾ ಅಂಚೆಯಿಂದ ೬—೧—೦

ರಜಿಸ್ಟರ ಅಂಚೆಯಿಂದ ೬—೨—೦

ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ

ಪ್ರಕಾಶಕರು :
ಬುರ್ಲಿ ಬಿಂದು ಮಾಧವ
ಮಿಂಚಿನಬಳ್ಳಿ ಕಾರ್ಯಾಲಯ,
ಧಾರವಾಡ

ಮುದ್ರಕರು :
ಎಸ್. ಎಲ್. ಜೋಶಿ
ಮೋಹನ ಮುದ್ರಣಾಲಯ
ಧಾರವಾಡ

# ವಿಷಯಾನುಕ್ರಮಣಿಕೆ







# ಮೊದಲ ಮಾತು

★

ಹಾಸ್ಯ ಪ್ರಬಂಧವು ' ಹೊಸ ಯೋಜನೆಯಲ್ಲಿಯ ಹನ್ನೆರಡನೆಯ ಪುಸ್ತಕವು. ಯೋಜನೆಯು ಮಂದವಾಗಿ ಸಾಗಿದೆ ಎಂಬ ಅರಿವು ನನಗಿದೆ. ಬರಹಗಾರರು ಗ್ರಂಥಗಳನ್ನು ಬರೆಯುತ್ತಲಿದ್ದಾರೆ. ಗ್ರಂಥಗಳು ಕೈಸೇರಿದಂತೆ, ಪ್ರಕಟಿಸುತ್ತಹೋಗುವೆ. ಈವರೆಗೆ ನಮ್ಮ ಯೋಜನೆಗೆ, ಮೂರುವರೆ ಸಾವಿರ ರೂಪಾಯಿಗಳು ರೋಖ ಬಂದಿದ್ದು, ಇನ್ನೂ ೧॥ ಸಾವಿರದಷ್ಟು, ವಚನ ವಿರುತ್ತವೆ. ಈ ಕಾರ್ಯಕ್ಕೆ ಕನಿಷ್ಠ ೨೫ ಸಾವಿರ ರೂಪಾಯಿಗಳಾದರೂ ಬೇಕಾಗಬಹುದೆಂದು ಅನಿಸುತ್ತದೆ.

ಈ ಹಾಸ್ಯ ಪ್ರಬಂಧದಲ್ಲಿಯ ಬಹು ಭಾಗವು, ಜಯಂತಿ, ಕರ್ಮವೀರ, ಕರ್ನಾಟಕ ವೈಭವ, ಸಂಯುಕ್ತ ಕರ್ನಾಟಕಗಳಲ್ಲಿ ಪ್ರಕಟವಾಗಿವೆ. ಕೆಲವು ಹೊಸ ಲೇಖಗಳಿವೆ. ಈ ಗ್ರಂಥದಲ್ಲಿ ದಿ. ಹನುಮಂತರಾಯರ ಲಲಿತ ಸಾಹಿತ್ಯವನ್ನಷ್ಟೇ (ನಮಗೆ ದೊರೆತಷ್ಟು) ಸಂಗ್ರಹಿಸಿದ್ದೇವೆ.

ಈ ಸಂಗ್ರಹದಲ್ಲಿ, ನಾಟ್ಯಘಟಗಳು, ವಿಡಂಬನಾತ್ಮಕ ಬರೆಹಗಳೂ ಕತೆಗಳೂ ಇರುವವು. ಇವುಗಳಲ್ಲಿ ರಾಯರ ಸಾಮಾಜಿಕ ದೃಷ್ಟಿ ಹೇಗೆ ಇತ್ತೆಂಬುದು ಒಡೆದು ಕಾಣಿಸುತ್ತದೆ. ವ್ಯಂಗ್ಯೋಕ್ತಿಗಳು ಹಾಸ್ಯವೂ ನಗೆಗಡಲಲ್ಲಿ ಮನವನ್ನು ತೇಲಿಸುತ್ತವೆ. ಅವುಗಳ ರಸವನ್ನು ಓದಿ ಅನುಭವಿಸಬೇಕೆ ವಿನಃ ಹೇಳಿ ಉಪಯೋಗವಿಲ್ಲ. ರಸಿಕ ಕನ್ನಡ ಜನಾಂಗವು ಇದರ ಉಪಯೋಗವನ್ನು ಚೆನ್ನಾಗಿ ಮಾಡಿಕೊಳ್ಳುವದೆಂದು ನಂಬಿದ್ದೇನೆ.

ಶ್ರೀಮಾನ್ ಕೌಜಲಗಿ ಮಧ್ವರಾಯರು, ಈ ಸಂಗ್ರಹವನ್ನು ಪ್ರಕಟಿಸಲು ಒಪ್ಪಿಗೆಯನ್ನಿತ್ತದ್ದಕ್ಕಾಗಿ ಅವರಿಗೂ ಜಯಂತಿ, ಕರ್ಮವೀರ, ಕ. ವೈಭವ, ಸಂಯುಕ್ತ ಕರ್ನಾಟಕದ ಸಂಪಾದಕರು ಅನುಮತಿ ಇತ್ತದ್ದಕ್ಕಾಗಿ ಅವರಿಗೆ ನಾನು ತುಂಬಾ ಋಣಿಯಾಗಿದ್ದೇನೆ.

ಕನ್ನಡಿಗರು ಎಂದಿನಂತೆ ಬಳ್ಳಿಗೆ ಪ್ರೋತ್ಸಾಹನವನ್ನೀಯುವರೆಂದು ನಂಬಿರುವೆ.

ತಮ್ಮ ಸೇವಕ

ಜುಲೈ ೧, ೧೯೫೧ — ಬುರ್ಲಿ ಬಿಂದುಮಾಧವ



ದೆ. ಭ. ಕೌಜುಲಗಿ ಹನುಮಂತರಾಯರು

# ಹಾಸ್ಯ-ಪ್ರಬಂಧಗಳು

**ಅರ್ಥಾತ**

# ರಾಯರ ಲಲಿತ ಸಾಹಿತ್ಯ

## ಬಡವರ ಬಂಧು
## ಕೌಜಲಗಿ ಹನುಮಂತರಾಯರು

(೧) ನಿಸ್ಸೀಮ ರಾಷ್ಟ್ರಭಕ್ತಿ, ವಿರಾಮವನ್ನರಿಯದ ಕಾರ್ಯತತ್ಪರತೆ ರಾಷ್ಟ್ರಕ್ಕಾಗಿ ಸರ್ವಸ್ವವನ್ನು ಅರ್ಪಿಸುವ ಆತ್ಮಾರ್ಪಣಬುದ್ಧಿ. ಅಪ್ರತಿಮ, ಸಾಹಸ, ರಾಷ್ಟ್ರಕ್ಕಾಗಿ ಸರ್ವಸ್ವವನ್ನು ಕಳೆದುಕೊಂಡರೂ ಸಕಲೈಶ್ವರ್ಯವಿದ್ದ ಪ್ರಸನ್ನತೆ, ಎಂತಹ ದುರ್ಧರ ಪ್ರಸಂಗಬಂದರೂ, ಅದನ್ನು ಎದುರಿಸುವ ಅಸಾಮಾನ್ಯ ಧೈರ್ಯ, ಮೇಲುಕೀಳೆನ್ನದೆ, ಎಲ್ಲರಲ್ಲಿಯೂ ಬೆರೆತು ಹೋಗುವ ಸಮಚಿತ್ತ ಹಾಗು ನಿರಹಂಕಾರವೃತ್ತಿ, ಸರಳಜೀವನ, ಪ್ರೇಮಲ ಸ್ವಭಾವ, ನಿಷ್ಠುರವಾದ ಸತ್ಯನಿಷ್ಠೆ, ಪವಿತ್ರವಾದ ಚಾರಿತ್ರ್ಯ ಇವೇ ಮೊದಲಾದ ಸದ್ಗುಣಗಳಿಂದಲೂ, ಸಾಹಿತ್ಯ, ಸಂಸ್ಕೃತಿ, ಸಮಾಜಸುಧಾರಣೆ, ಆರ್ಥಿಕ ವಿಚಾರ, ರಾಜಕಾರಣ, ಮುಂತಾದ ರಾಷ್ಟ್ರಜೀವನದ ಎಲ್ಲ ರಂಗಗಳಲ್ಲಿಯೂ, ನಿರಾತಂಕವಾಗಿ ವಿಹರಿಸುವ ಕುಶಾಗ್ರಬುದ್ಧಿಯಿಂದಲೂ, ಕನ್ನಡ ಜನಾಂಗದ ಹೃದಯದ ಗದ್ದುಗೆಯನ್ನೇರಿ, ಸ್ಥಿರಸ್ಥಾನ ಪಡೆದವರೆಂದರೆ, ಕೌಜಲಗಿ ಹನುಮಂತರಾಯರು. ಕರ್ತೃತ್ವಶಕ್ತಿ, ಕಾರ್ಯಕೌಶಲ್ಯ, ಕುಶಾಗ್ರಬುದ್ಧಿ ಇವುಗಳ ತ್ರಿವೇಣಿ ಸಂಗಮವು ಒಬ್ಬರಲ್ಲಿಯೇ ಆಗುವದು ಬಹು ಅಪರೂಪ. ಈ ಮೂರೂ ಗುಣಗಳ ಮೂರ್ತಿಮಂತರಾದ ಹನುಮಂತರಾಯರು ಜನತೆಯನ್ನು ಮುಗ್ಧಗೊಳಿಸಿದ್ದೇನಾಶ್ಚರ್ಯ! ರಾಯರ ರಾಷ್ಟ್ರೀಯ ಜೀವನವು ಕನ್ನಡಿಗರನ್ನು ಬಡಿದೆಬ್ಬಿಸಿತು,

ನವಕರ್ನಾಟಕಕ್ಕೆ ಭದ್ರವಾದ ತಳಹದಿಯನ್ನು ಹಾಕಿತು. ಕನ್ನಡಿಗರನ್ನು ಕಟ್ಟಿತು. ಕಾರ್ಯರಂಗಕ್ಕಿಳಿಸಿತು. ಅವರನ್ನು ಕುಣಿಸಿತು. ತಾನೂ ಕುಣಿಯಿತು. ನಗಿಸಿತು. ತಾನೂ ನಕ್ಕಿತು. ಎಲ್ಲರಿಗೂ ಆದರ್ಶವಾಯಿತು.

ಅವರ ಈ ತುಂಬು ಜೀವನವು, ಕೋಹಿನೂರು ರತ್ನವಿದ್ದಂತೆ. ಯಾವ ದಿಕ್ಕಿನಲ್ಲಿ ನೋಡಿದರೂ ದಿವ್ಯ ಬೆಳಕನ್ನು ಹೊರಹೊಮ್ಮುವದು. ಚಂದಿರನ ಬೆಳದಿಂಗಳಂತೆ, ಆಲ್ಹಾದ ಕರವಾಗಿರುವದು. ಅರಳಿದ ಗುಲಾಬಿಯಂತೆ, ಎಲ್ಲರ ಚಿತ್ತವನ್ನು ಆಕರ್ಷಿಸಿ, ಕ್ಷಣಕ್ಷಣಕ್ಕೂ ಸುಗಂಧವನ್ನು ಬೀರುವದು. ಇಂತಹ ದಿವ್ಯ, ಭವ್ಯ, ಶುದ್ಧ ವೀರ ಜೀವನವು ತರುಣರಿಗೆ ಆದರ್ಶವಾಗದೆ, ಯಾರದಾಗಬೇಕು ?

ಕೌಜಲಗಿ ಹನುಮಂತರಾಯರು ಈ ೩-೪ ದಶಕದ ಕನ್ನಡಿಗರಿಗೆ ಚಿರಪರಿಚಿತರಿದ್ದರೂ ಅವರ ಊರು ಯಾವುದು ? ಇವರ ಮೂಲ ಮನೆತನ

**೨) ಮನೆತನ**

ವೆಲ್ಲಿಯದು ? ಇವರಲ್ಲಿ ಇಂತಹ ಸದ್ಗುಣಗಳು ಮೈವೆತ್ತಲು ಕಾರಣಗಳೇನು ? ಎಂಬ ಮಾತುಗಳು ಸಾಮಾನ್ಯವಾಗಿ ಬಹುಜನರಿಗೆ ಗೊತ್ತಿಲ್ಲ ಅಷ್ಟೇಕೆ ? ಸ್ವತಃ ತಮ್ಮ ತಮ್ಮ ಮನೆತನಗಳ ಚರಿತ್ರೆಯನ್ನರಿತವರು ಎಷ್ಟು ಜನ ? ಈ ಬಗೆಯ ಚಿಕಿತ್ಸಕ ಬುದ್ಧಿಯೇ ನಮ್ಮ ಜನಾಂಗದಲ್ಲಿ ಕಡಿಮೆ. ಇಂದಿನ ಸಮಾಜವು,ಮುಂದಿನ ಸಮಾಜದ ಜನನಿ, ಎಂಬ ಮಾತು ಬಹುಜನರ ಲಕ್ಷ್ಯದಲ್ಲಿ ಬರುವದಿಲ್ಲ.

ಕೌಜಲಗಿಯವರು, ಗೋಕಾಕ ತಾಲೂಕಿನ ಕೌಜುಲಗಿ ಊರವರೇ ! ಇವರ ಪೂರ್ವಜರು ಕೌಜುಲಗಿ ದೇಸಾಯಿಯರ ಮುತಾಲೀಕರು. ಇಂದಿಗೂ ಇವರ ಮನೆತನಕ್ಕೆ ದೇಶಗತಿಯ ಇನಾಮುಗಳು ನಡೆಯುತ್ತವೆ. ಹನುಮಂತರಾಯರ ತಂದೆಯವರಾದ ಶ್ರೀ ಪತಿರಾಯರು ಮುತಾಲೀಕ ಕೆಲಸವನ್ನೂ ಕೌಜುಲುಗಿಯನ್ನೂ ತ್ಯಜಿಸಿದರೂ ಕೌಜಲಗಿ ಎಂಬ ಅಡ್ಡ ಹೆಸರು ಮಾತ್ರ ಇವರ ಬೆನ್ನು ಬಿಡಲಿಲ್ಲ. ಸ್ವತಂತ್ರ ವೃತ್ತಿಯವರೂ ಮಹತ್ವಾಕಾಂಕ್ಷಿಗಳೂ ಆದ ಶ್ರೀಪತಿರಾಯರಿಗೆ, ಈ ಕೆಲಸವು ಮನಸ್ಸಿಗೆ ಬರದೆ ಅವರು ಊರು ಬಿಟ್ಟು ಬೆಳಗಾವಿಗೆ ಬಂದು, ಅಲ್ಲಿ ಪ್ರಸಿದ್ಧ ವಕೀಲರಾಗಿದ್ದ ದಾತಾರ ತಿರುಮಲರಾಯರಲ್ಲಿ ಕಾರಕೂನರಾದರು. ಚಾಣಾಕ್ಷರಾದ ಇವರು ವರ್ಷ ಎರಡುವರ್ಷ

ಗಳಲ್ಲಿಯೇ ಆ ಕಲೆಯಲ್ಲಿ ತಜ್ಞರಾದರು. ತಾವು ಸ್ವತಂತ್ರ ರೀತಿಯಿಂದ ಈ ಉದ್ಯೋಗವನ್ನು ನಡೆಯಿಸಬಹುದೆಂಬ ಆತ್ಮವಿಶ್ವಾಸವುಳ್ಳವರಾದರು. ಪಕ್ಕಬಲಿತೊಡನೆ ಪಕ್ಷಿಯು ಗೂಡಿನಲ್ಲಿರುವದೇ? ಶ್ರೀ ಪತಿರಾಯರು ಸ್ವತಂತ್ರ ರಾಗಿ ಬಾಳಬೇಕೆಂದು ಹೈದ್ರಾಬಾದಕ್ಕೆ ತೆರಳಿದರು. ಆದರೆ ಮನೆತನದವರ ಆಗ್ರಹದಿಂದ ಮರುಳಿಬಂದು, ಮುಧೋಳದಲ್ಲಿ ನೆಲೆಸಿದರು. ಅರ್ಜಿ, ಮೃತ್ಯು ಪತ್ರಗಳನ್ನು ಬರೆಯುವದು, ಕಾಯದೆಯ ಸಲಹೆಗಳನ್ನು ಕೊಡುವದು, ಮುಕ್ತ್ಯಾರು ಪತ್ರವನ್ನು ಸ್ವೀಕರಿಸಿ, ಖಟ್ಲೆಗಳನ್ನು ನಡೆಯಿಸುವದು ಇಂತಹ ಕಾರ್ಯಗಳನ್ನು ಕೈಕೊಂಡು ತಮ್ಮ ಕುಶಾಗ್ರ ಬುದ್ಧಿಯಿಂದ ಅಲ್ಪಾವಧಿ ಯಲ್ಲಿಯೇ ಲೋಕಪ್ರಿಯರಾದರು. ವಕೀಲರು ಸಹ ಇವರ ಸಲಹೆಗಳನ್ನು ಕೇಳಹತ್ತಿದರು. ಶ್ರೀಪತಿರಾಯರ ಪ್ರಸ್ಥವು ಬೆಳೆಯಿತು. ಚುರುಕು ಬುದ್ಧಿ ಯವರೂ ಪರೋಪಕಾರಿಗಳೂ ಧೈರ್ಯಶಾಲಿಗಳೂ ಎಂದು ಇಂದಿಗೂ ಮುಧೋಳ ಸಂಸ್ಥಾನದ ಹಳ್ಳಿಗಳಲ್ಲಿ ಶ್ರೀಪತಿರಾಯರ ಖ್ಯಾತಿಯಿದೆ.

ಶ್ರೀಪತಿರಾಯರು ಪಾಪಭೀರುಗಳು. ಅನ್ಯಾಯ ಅಸತ್ಯಗಳು ಅವರಿಗೆ ಸಹನವಾಗುತ್ತಿದ್ದಿಲ್ಲ. ಅದು ಎಲ್ಲಿಯೋ ನಡೆಯಲಿ ಅದನ್ನು ಪ್ರತಿಭಟಿಸುತ್ತಿದ್ದರು. ಆಗಿನ ಕಾಲದ ಸಂಸ್ಥಾನಿಕರ ಆಳಿಕೆಯನ್ನು ಕೇಳಬೇಕೆ ! ಪ್ರಜೆಗಳು ತಮ್ಮ ಸ್ವತ್ತು, ಎಲ್ಲವೂ ತಮ್ಮ ಭೋಗಕ್ಕಾಗಿ, ಎಂಬ ಕಲ್ಪನೆಯುಳ್ಳ ಅವರಿಂದ ರಾಜ್ಯದಲ್ಲಿ ಅನೇಕ ಅನ್ಯಾಯಗಳು ಜರಗುತ್ತಿದ್ದವು ಅವೆಲ್ಲವುಗಳನ್ನು ಧೈರ್ಯ ದಿಂದ ಎದುರಿಸುವ ಬಂಟರೆಂದರೆ, ಶ್ರೀಪತಿರಾಯರೊಬ್ಬರೇ ಎಂದು ಇಂದಿಗೂ, ಮುಧೋಳದ ಜನ ಹೇಳುತ್ತದೆ. ಒಮ್ಮೆ ರೂಪವತಿಯಾದ ಯುವತಿಯೊಬ್ಬಳು ಹೊಸ್ತಿಲ ಸಾರಿಸಿ ರಂಗವಲ್ಲಿಯನ್ನು ಹಾಕುತ್ತಿರುವಾಗ ಸಂಸ್ಥಾನಿಕರ ಸ್ವಾರಿಯು ಆ ಬೀದಿಯಲ್ಲಿ ಹೋಗುತ್ತಿತ್ತಂತೆ, ಅವರ ವಕ್ರದೃಷ್ಟಿಯು ಯುವತಿಯ ಮೇಲೆ ಬಿದ್ದಿತು. ಯುವತಿಯನ್ನು ಅಪಹರಿಸಿ, ಗಾಡಿಯಲ್ಲಿ ಹಾಕಿದರಂತೆ, ಇದೆಲ್ಲ ಅನ್ಯಾಯವನ್ನು ನೋಡುತ್ತಿದ್ದ ಶ್ರೀಪತಿರಾಯರು ಹಸಿದ ಹುಲಿಯಂತೆ, ಟಣ್ಣನೆ ಗಾಡಿಯೊಳಕ್ಕೆ ಹಾರಿ, ಯುವತಿಯನ್ನು ಬಿಡಿಸಿಕೊಂಡು ಬಂದರಂತೆ. ಇದರಿಂದ ಸಂಸ್ಥಾನಿಕರು ಕಿಡಿಕಿಡಿಯಾದರು. ಶ್ರೀಪತಿರಾಯರನ್ನು ಬಂಧಿಸುವ ಹೊಂಚು ಹಾಕಿದರು. ಜನತೆಯ ಪ್ರೀತಿಗೆ ಪಾತ್ರರಾದವರನ್ನು ಬಂಧಿ

ಸುವದು ಹೇಗೆ! ಜನತೆಯೇ ಅವರಿಗೆ ರಕ್ಷಣೆಯನ್ನೀಯಿತು. ಆರು ತಿಂಗಳ ವರೆಗೆ ಸರಕಾರವು ಎಷ್ಟು ಪ್ರಯತ್ನಿಸಿದರೂ ಅವರನ್ನು ಹಿಡಿಯುವದಾಗಲಿಲ್ಲ. ತಮ್ಮಿಂದ ಎರಡನೆಯವರಿಗೆ ತೊಂದರೆಯಾಗುತ್ತಿರುವದನ್ನು ಕಂಡು, ಶ್ರೀಪತಿ ರಾಯರೇ ಬಾಗಲಕೋಟೆಗೆ ಬಂದು ನಿಂತರೆಂದು ಜನ ಕಥೆ ಹೇಳುತ್ತಾರೆ. ಅವರ ಮರಣವೂ ಕೂಡ ವಿಚಿತ್ರವೇ. ಒಮ್ಮೆ ಇವರು ಮುಚನಾಳ ಗ್ರಾಮಕ್ಕೆ ಹೊರಟಾಗ ತಮಗೆ ಕಾಲರಾಬೇನೆ ಬಂದಂತೆ ಅನಿಸಿದೊಡನೆ, ತಮ್ಮ ಹತ್ತಿರ ವಿದ್ದ ಆಳಿನ ಕೈಯಲ್ಲಿ ತಮ್ಮಲ್ಲಿದ್ದ ಹಣವನ್ನೆಲ್ಲಕೊಟ್ಟು 'ಈ ಹಣದಿಂದ ನನ್ನ ಅಂತ್ಯ ಸಂಸ್ಕಾರ ಮಾಡಬೇಕು, ನನ್ನ ಅಂತ್ಯ ಸಂಸ್ಕಾರವಾದ ಮೇಲೆ, ಊರಿಗೆ ಸುದ್ದಿ ತಿಳಿಸಬೇಕು. ಎಂದು ಹೇಳಿ ಶಾಂತರೀತಿಯಿಂದ ದಾರಿಯಲ್ಲಿಯೇ ಪ್ರಾಣಬಿಟ್ಟರಂತೆ. ಆ ಹಳ್ಳಿ ಯ ಜನರಿಂದಲೇ ಅವರ ಅಂತ್ಯ ಸಂಸ್ಕಾರವಾಯಿತು. ಶ್ರೀಪತಿರಾಯರ ಈ ಧೈರ್ಯ, ಸಾಹಸ, ಕುಶಾಗ್ರ ಬುದ್ಧಿ, ಜನಸೇವೆಗಳೇ ಮೂಲಧನವಾಗಿ ಹನುಮಂತರಾಯರಿಗೆ ಬಂದವೆಂದು ಹೇಳಬಹುದು.

ಹನುಮಂತರಾಯರ ಹುಟ್ಟು ಒಂದು ದೈವೀಘಟನೆಯೆಂದು ಹೇಳ ಬಹುದು. ಈ ಸಂಗತಿಯನ್ನು ಕೇಳಿದೊಡನೆ ದೊಡ್ಡವರಿಗೆಲ್ಲ ಇಂತಹದೊಂದು ಕಥೆ ಹೇಳುವ ವಾಡಿಕೆಯೆಂದು ಮೂಗು ಮುರಿಯುವವರಿ

**ರಾಯರ ಜನ್ಮ**

ಗೇನೂ ಕಡಿಮೆಯಿಲ್ಲ ಆದರೆ ಇದು ಸತ್ಯಸಂಗತಿ. ಶ್ರೀಪತಿ ರಾಯರಿಗೆ ಅನೇಕ ದಿನಗಳವರೆಗೆ ಗಂಡುಮಕ್ಕಳಾಗಲಿಲ್ಲ. ಇಬ್ಬರು ಮೂವರು ಹೆಣ್ಣುಮಕ್ಕಳೇ ಹುಟ್ಟಿದರು. ಆಗ ಹನುಮಂತರಾಯರ ತಾಯಿಯವರಾದ ಯಮುನಾಬಾಯಿಯವರು, ಗಂಡುಸಂತಾನಕ್ಕಾಗಿ ಅನೇಕ ದೇವರಿಗೆ ಹರಿಕೆ ಹೊತ್ತರು. ವ್ರತೋಪವಾಸಮಾಡಿದರು. ತಮಗೆ ಗಂಡು ಹುಟ್ಟಿದರೆ, ಜೋಡು ಗಣಪತಿ ಕೂಡಿಸುವೆನೆಂದು ಬೇಡಿಕೊಂಡರು. ಆ ಮೇಲೆ ಅವರಿಗೆ ಗಂಡುಮಗುವು ೧೮೯೦ ರಲ್ಲಿ ಜನಿಸಿತು. ಅವರೇ ಈ ಪುಸ್ತಕದ ಲೇಖಕರೂ, ಕರ್ನಾಟಕದ ಶ್ರೇಷ್ಠ ಮುಖಂಡರಲ್ಲಿ ಒಬ್ಬರೂ ಅದ ಕೌಜಲಗಿ ಹನುಮಂತರಾಯರು. ಅವರು ಹುಟ್ಟಿದಂದಿನಿಂದ ಅವರ ಮನೆಯಲ್ಲಿ ಈಗಲೂ ಜೋಡು ಗಣಪತಿಯನ್ನು ಕೂಡಿಸುತ್ತಾರೆ. ಈ ಸಂಗತಿಯನ್ನು ಸ್ವತಃ ಹನು ಮಂತರಾಯರು ನಾನೇನು ಕಡಿಮೆಯವನೇ! ಎಂದು ಚೇಷ್ಟೆಯಲ್ಲಿ ಹೇಳುತ್ತಿದ್ದರು.

ಬೀಜವು ಭೂಮಿಯೊಳಗಿನ ಸತ್ವವನ್ನು ಹೀರಿಕೊಂಡು ಬೆಳೆದು ಹೂ ಕಾಯಿಗಳನ್ನು ಕೊಡುವಂತೆ, ಮಾನವನೂ ಮನೆತನದ ಗುಣಗಳನ್ನು ತನ್ನ ಯೋಗ್ಯತೆಯಂತೆ, ಸ್ವೀಕರಿಸಿ ಬೆಳೆಯುವನು. ಹನುಮಂತ

**ಬಾಲ್ಯಜೀವನ**

ರಾಯರಲ್ಲಿ ತಂದೆತಾಯಿಗಳ ಒಳ್ಳೆ ಗುಣಗಳಿಗೆ ಒಳ್ಳೇ ಕ್ಷೇತ್ರವು ದೊರೆಯಿತು. ಅವು ಭರದಿಂದ ಬೆಳೆದು, ಸುಮಧುರವಾದ ಫಲಗಳನ್ನಿತ್ತವು. ಹನುಮಂತರಾಯರ ಬಾಲ್ಯ, ಪ್ರಾಥಮಿಕ ಹಾಗು ( ಮಾಧ್ಯಮಿಕ ೬ನೇ ಈಯತ್ತೆಯವರೆಗೆ ) ಮಾಧ್ಯಮಿಕ ಶಿಕ್ಷಣ, ಮುಧೋಳದಲ್ಲಿಯೇ ಆಯಿತು. ಶಾಲೆಯಲ್ಲಿ ಅವರು ತೀಕ್ಷ್ಣ ಬುದ್ಧಿಯುವರೆಂದು ಹೆಸರಾಗದಿದ್ದರೂ ಜಾಣಹುಡುಗರಲ್ಲಿ ಇವರ ಗಣನೆಯದ್ದಿತು. ಆದರೆ ತುಂಟರೂ ಶಾಲೆಯನ್ನು ತಪ್ಪಿಸುವವರೂ, ಸ್ವತಂತ್ರ ವೃತ್ತಿಯವರೂ ಎಂದು ಹೆಸರಾಗಿದ್ದರು.

ಹನುಮಂತರಾಯರ ಬಾಲ್ಯವೆಂದರೆ ಭಾರತದಲ್ಲಿ ರಾಷ್ಟ್ರೀಯತೆಯು ಉಕ್ಕೇರಿದ ಕಾಲ. ವಂಗಭಂಗದಿಂದ ರಾಷ್ಟ್ರದಲ್ಲೆಲ್ಲ ಸ್ವದೇಶಾಭಿಮಾನದ ಗಾಳಿಯು ಬೀಸಹತ್ತಿತ್ತು, ಲೋಕಮಾನ್ಯ ತಿಲಕರು ವೀರಗರ್ಜನೆಯನ್ನು ಮಾಡುತ್ತ ರಾಷ್ಟ್ರಾಭಿಮಾನವನ್ನು ಜಾಗೃತಗೊಳಿಸುತ್ತಿದ್ದ ಕಾಲವದು. ಇದರ ಪರಿಣಾಮ ರಾಯರ ಮೇಲೆ ಆಗದೆ ಬಿಟ್ಟೀತೆ ? ಈ ವಾತಾವರಣವು, ರಾಯರಿಗೆ ರಾಷ್ಟ್ರಧರ್ಮದ ದೀಕ್ಷೆಯನ್ನು ಕೊಟ್ಟಿತು. ಲೋಕಮಾನ್ಯರ ಭಾಷಣಗಳ ಪರಿಣಾಮ ಇವರ ಕೋಮಲ ಮನಸ್ಸಿನ ಮೇಲೆ ಪ್ರಭಾವವನ್ನು ಬೀರಿತು. ರಾಯರು ಕಾರ್ಯರಂಗಕ್ಕಿಳಿದರು. ಶಾಲೆಯಲ್ಲಿಯೇ ವಾಗ್ಭಟ ಅಥವಾ ವಾಗ್ಬಾಣವೆಂಬ ಕೈಬರಹದ ಪತ್ರಿಗೆಯನ್ನು ಪ್ರಾರಂಭಿಸಿದರು. ವಸಂತ ಬರುತ್ತಲೇ ಕೋಗಿಲೆ ಉಲಿಯುವಂತೆ,ರಾಯರ ಕಾವ್ಯ ಕೋಗಿಲೆಯು ದೇಶಾಭಿಮಾನದ ಹಾಡುಗಳನ್ನು ಹಾಡಹತ್ತಿತು. ಮರಾಠಿಯಲ್ಲಿ ಪದಪದ್ಯಗಳನ್ನು ರಚಿಸಹತ್ತಿದರು. ಮೇಳಗಳನ್ನು ಸಂಘಟಿಸಹತ್ತಿದರು. ಮೆರವಣಿಗೆಗಳನ್ನು ತೆಗೆಯಿಸಹತ್ತಿದರು. ಹೀಗೆ ಮುಧೋಳ ಸಂಸ್ಥಾನವು ಇವರ ಕಾರ್ಯಕ್ಷೇತ್ರವಾಗಿದ್ದಿತು. ಬ್ರಿಟಿಶ ಸರಕಾರದ ಬಗಲಗೂಸುಗಳಾದ ಸಂಸ್ಥಾನಿಕರು ಇದನ್ನು ಸಹಿಸುವದೆಂತು ? ರಾಯರು, ಒಳ್ಳೇ ಜಾಗರೂಕತೆಯಿಂದ ಕಾರ್ಯ ಸಾಗಿಸುತ್ತಿದ್ದರು. ಇವರು ಯಾರಿಗೂ ಗೊತ್ತಾಗದಂತೆ, ಮುಧೋಳದಿಂದ

೬ ಮೈಲು ಮೇಲಿನ ಒಂದು ಗುಪ್ತ ಸ್ಥಳದಲ್ಲಿ ತಮ್ಮ ಎಲ್ಲ ಗೆಳೆಯರೊಂದಿಗೆ ತಮ್ಮ ಚಟುವಟಿಕೆಗಳನ್ನು ಸಾಗಿಸಿದ್ದರು.

ಆ ಆಂದೋಲನದಲ್ಲಿ ಸ್ವದೇಶಿವ್ರತವು ಬಹುಮುಖ್ಯವಾಗಿದ್ದಿತು. ಇದೇ ರಾಷ್ಟ್ರದ ಶಕ್ತಿಯು. ವಂಗಭಂಗವು ರಾಷ್ಟ್ರದ ವಿವಿಧ ಮುಖಗಳಿಗೆ–ಶಕ್ತಿಗಳಿಗೆ ಚಲನೆಯನ್ನು ಕೊಟ್ಟು ನವಭಾರತಕ್ಕೆ ಅಡಿಗಲ್ಲನ್ನು ಹಾಕಿತೆಂದು ಹೇಳಬಹುದು. ಈ ಚಳವಳಿಯ ಪರಿಣಾಮವು ಆಗಿನ ತರುಣರಲ್ಲಿ ಆಳವಾಗಿ ಆಯಿತು. ಲಕ್ಷಾವಧಿ ತರುಣರು ಸ್ವದೇಶಿ ವ್ರತಬದ್ಧರಾದರು. ಹನುಮಂತ ರಾಯರೂ ಇವರಲ್ಲಿ ಒಬ್ಬರು. ಅಂದಿನಿಂದಲೇ ಇವರು ಸ್ವದೇಶಿ ವಸ್ತುಗಳನ್ನು ಉಪಯೋಗಿಸಲು ಪ್ರಾರಂಭಿಸಿದರಲ್ಲದೆ, ಸ್ವದೇಶಿ ವಸ್ತುಗಳ ನಿರ್ಮಾಣಕ್ಕೂ ಕೈಯಿಕ್ಕಿದರು.

**ಕೂದಲ ಕಳ್ಳರು ಯಾರು**

ಹನುಮಂತರಾಯರ ಹಿರಿಯರಾದ ಶ್ರೀಪತಿರಾಯರು ಲೋಕಪ್ರಿಯ ರಾದ ಮುಂದಾಳುಗಳಷ್ಟೆ! ಅವರೆಡೆಗೆ, ಕೆಲಸಕ್ಕಾಗಿ ಅನೇಕ ಹಳ್ಳಿಯ ಜನರು, ಬರುತ್ತಿದ್ದರು. ಇವರ ಆತಿಥ್ಯವನ್ನು ಹೊಂದುತ್ತಿದ್ದರು ಅಂದಿನ ಕಾಲದ ವಾಹನ ಸೌಕರ್ಯವೆಂದರೆ ಕುದುರೆಯಷ್ಟೆ! ಇವರ ಮನೆಯಲ್ಲಿ ಕಟ್ಟಿದ ಕುದುರೆಗಳ ಬಾಲಗಳೆಲ್ಲ ಬೆಳಗುಹರಿಯುವ ಒಳಗೆ ಮೊಂಡವಾಗಿರುತ್ತಿದ್ದವು. ಅನೇಕ ದಿನಗಳ ವರೆಗೆ, ಶ್ರೀಪತಿರಾಯರಿಗೂ ಬಂದ ಜನರಿಗೂ ಇದರ ಗೂಢವೇ ಗೊತ್ತಾಗಲಿಲ್ಲ. ಇತ್ತ ಹನುಮಂತರಾಯರಿಗೆ, **ಸ್ವದೇಶಿ ಬ್ರಶ್**, ಮಾಡಲು ಸಾಕಷ್ಟು ಕುದರೆ ಜವೆಗಳು ದೊರೆಯುತ್ತಿದ್ದವು! ಕೂದಲ ಕಳ್ಳರು ಯಾರು? ಎಂಬ ಪ್ರಶ್ನೆಯು ಇಡಿ ಊರನ್ನೇ ಚಕಿತಗೊಳಿಸಿದ್ದಿತು. ಒಮ್ಮೆ ಜವೆ ಕತ್ತರಿಸುವ ಸಮಯಕ್ಕೆ ಕುದುರೆಯ ಒದೆತದಿಂದ ಪೆಟ್ಟಿತೆಂದ ಬಾಲಕನು ವೇದನೆಯನ್ನು ತಾಳಲಾರದೆ ಕಿರುಚಿಕೊಂಡನು. ಕತ್ತಲೆಯಲ್ಲಿ, ಯಾರು ಚೀರಿದರು? ಯಾರಿಗೆ ಏನಾಯಿತು? ಎಂದು ನೋಡುವಷ್ಟರಲ್ಲಿ ತಲೆಯಿಂದ ರಕ್ತ ಸೋರುವ ಬಾಲಕನನ್ನು ಕಂಡರು. ಕೂದಲ ಕಳ್ಳರ ರಹಸ್ಯವು ಹೊರಬಿದ್ದಿತು. ಆ ಬಾಲಕನು ಅಂದು ಕಿರುಚಿಕೊಳ್ಳದಿದ್ದರೆ, ಇಂದು ಹಿಂದುಸ್ಥಾನದಲ್ಲೆಲ್ಲ ಹನುಮಂತರಾಯರ ಸ್ವದೇಶಿ ಬ್ರಶ್ಶುಗಳನ್ನು

ಕಾಣಬಹುದಾಗಿತ್ತೋ ಏನೋ! ಅವರ ಈ ಸ್ವದೇಶಿ ಒಲುಮೆ ಬೆಳೆದು ಭವ್ಯವಾದ ಗ್ರಾಮೋದ್ಯೋಗ ರೂಪವನ್ನು ತಾಳಿತೆಂದು ಹೇಳಬಹುದು.

ಹನುಮಂತರಾಯರು ಇಂಗ್ಲೀಷ ೬-೭ ಈಯತ್ತೆಗಳ ಅಭ್ಯಾಸವನ್ನು ವಿಜಾಪೂರದಲ್ಲಿ ಮುಗಿಸಿದರು. ಇಲ್ಲಿ ಹೈಸ್ಕೂಲಿನಲ್ಲಿರುವಾಗ ರಾಯರ ಚಟವಟಿಕೆಗಳು ನಡೆದೇ ಇದ್ದವು. ಕಲಿಸಲು ಬಾರದ ಶಿಕ್ಷಕ **ತರುಣರ ಸಂಘಟಿಕ** ರೊಬ್ಬರು ಬಂದರಂತೆ, ಹನುಮಂತರಾಯರು ಅವರ ವಿರುದ್ಧವಾಗಿ ಬಂಡು ಹೂಡಿದರು. ಬೇರೆ ಬೇರೆ ವಿದ್ಯಾರ್ಥಿಗಳ ಮುಖಾಂತರ ಈ ಶಿಕ್ಷಕರನ್ನು ಬದಲು ಮಾಡಿರಿ, ಅವರು ಹೇಳಿದ್ದು ನಮಗೆ ತಿಳಿಯುವದಿಲ್ಲ. ಎಂದು ಮೇಲಧಿಕಾರಿಗಳಿಗೆ ಹೇಳಿಸಿದರು. ಉಪಯೋಗವಾಗಲಿಲ್ಲ. ಸಂಪು ಹೂಡುವದಕ್ಕಾಗಿ ವಿದ್ಯಾರ್ಥಿಗಳನ್ನು ಸಂಘಟಿಸಿದರು. ಆಗ ಅಧಿಕಾರೀ ವರ್ಗವು ಹನುಮಂತರಾಯರ ಸಂಘಟನಾ ಶಕ್ತಿಯನ್ನು ಕಂಡು ಬೆರಗಾಯಿತಂತೆ. ಈ ವ್ಯಕ್ತಿಯು ಸಾಮಾನ್ಯನಿಲ್ಲ. ಇಂದಿಲ್ಲ ನಾಳೆ ಇವನು ರಾಷ್ಟ್ರದ ಮುಖಂಡನಾಗಿ, ಮಹತ್ವದ ಕಾರ್ಯಗಳನ್ನು ಮಾಡುವನೆಂದು ಶಿಕ್ಷಕರೆಲ್ಲರೂ ಭವಿಷ್ಯವನ್ನು ಕಟ್ಟಿದ್ದರಂತೆ. ಇದರಿಂದ ವಿದ್ಯಾರ್ಥಿ ವೃಂದದಲ್ಲಿ ರಾಯರ ಬಗ್ಗೆ ಆದರವು ಬೆಳೆಯಿತು. ಕರ್ನಾಟಕದ ಉಪಕುಲಪತಿಗಳಾದ ಜಹಗೀರದಾರ ರಂಗಾಚಾರ್ಯರೂ, ಸಾಲೀ ರಾಮಚಂದ್ರರಾಯರೂ ಇವರ ಸಹಾಧ್ಯಾಯಿಗಳು. ಪರಮಮಿತ್ರರು. ಇದೇ ಸಮಯಕ್ಕೆ ಪ್ರೊ. ವಿಜಾಪೂರಕರರು ತಳೆಗಾಂವದಲ್ಲಿ ಸಮರ್ಥ ವಿದ್ಯಾಲಯವನ್ನು ತೆಗೆದೊಡನೆಯೇ ದೇಶಪ್ರೇಮಿಗಳಾದ ಇವರ ಮನಸ್ಸು ಆ ಕಡೆಗೆ ಹರಿಯಹತ್ತಿತ್ತು ಹೇಗೊ ಪ್ರಯತ್ನಿಸಿ ಅಲ್ಲಿಗೆ ಹೋಗಿಯೂ ಬಂದರಂತೆ. ಅವರ ಲಂಗೋಟಿ ಗೆಳೆಯರಾದ ಶ್ರೀ. ಬಕ್ಷಿಬಾಬೂರಾಯರು ಅವರ ಬಾಲ್ಯಜೀವನದ ಬಗೆಗೆ ಅನೇಕ ರಮ್ಯ ಕಥೆಗಳನ್ನು ಹೇಳುತ್ತಾರೆ. ಅವನ್ನೆಲ್ಲ ಈ ಚಿಕ್ಕ ಚರಿತ್ರೆಯಲ್ಲಿ ಕೊಡುವದು ಸಾಧ್ಯವಿಲ್ಲ.

ದೇಶಭಕ್ತಿಯಿಂದ ಪ್ರೇರಿತನಾದ ಈ ಬಾಲಕನ ಮನಸ್ಸು, ಇತಿಹಾಸದ ಕಡೆಗೆ ಹೊರಳಿತು. ಭವ್ಯವಾದ ಗೋಳಗುಮ್ಮಟವೂ ಆಸಾರ ಮಹಾಲೂ, ವಿಜಾಪೂರವನ್ನೆಲ್ಲ ವ್ಯಾಪಿಸಿದ ಗೋರಿಗಳೂ ಇವರ ಮನಸ್ಸನ್ನು ಆಕರ್ಷಿಸಿಡವು. ಅವುಗಳ ಇತಿಹಾಸದನ್ನು ತಿಳಿದುಕೊಳ್ಳುವ ಕುತೂಹಲವು ಉಂಟಾಯಿತು.

ಎಷ್ಟೋ ಸಲ ಶಾಲೆ ತಪ್ಪಿಸಿ, ಅಲ್ಲಿರುವ ಮಸೀದಿಗಳನ್ನೂ ಗೋರಿಗಳನ್ನೂ ಎಣಿಸಲು ಹೋಗಿ ತಂದೆಯವರಿಂದ ಬೈಯಿಸಿಕೊಂಡದ್ದು ಉಂಟಂತೆ, ಅವುಗಳ ಅಭ್ಯಾಸವೇ ಮುಂದೆ ಪರಿಪಕ್ವವಾಗಿ, ' ವ್ಹಿಜಿಟ್ ಟು ವಿಜಾಪೂರ, ಎಂಬ ಗ್ರಂಥವನ್ನು ಬರೆಯಲು ಹಚ್ಚಿತು. ಶಾಲೆಯ ಪುಸ್ತಕಗಳನ್ನೇ ಓದದ ಆಲಸಿಗಳಾದ ವಿದ್ಯಾರ್ಥಿಗಳೆಲ್ಲಿ? ಇವರೆಲ್ಲಿ! ಆದುದರಿಂದಲೇ ಸಾಮಾನ್ಯರಿಗಿಂತಲೂ ಈ ಜೀವ ದೊಡ್ಡದೆನ್ನುವದು.

ಹೈಸ್ಕೂಲಿನ ಜೀವನವು ಮುಗಿದು ರಾಯರ ಕಾಲೇಜಿನ ಶಿಕ್ಷಣವು ಪ್ರಾರಂಭವಾಯಿತು. ವಿಜಾಪೂರವನ್ನು ಬಿಟ್ಟು ಪುಣ್ಯನಗರಿಗೆ ಬಂದರು.

**ವಿಶ್ವವಿದ್ಯಾಲಯದಲ್ಲಿ ಕ್ರಾಂತಿಕಾರ ಜೀವನ**

ರಾಯರ ಜೀವನದಲ್ಲಿ ಇದು ವಸಂತಕಾಲವೆಂದು ಹೇಳಬಹುದು. ತಮ್ಮ ವಿವಿಧ ವಿಚಾರಗಳಿಗೆ. ಪ್ರವೃತ್ತಿಗಳಿಗೆ ನಿಶ್ಚಿತ ರೂಪ ಕೊಡುವ ಕಾಲ. ಧ್ಯೇಯ ಧೋರಣಗಳನ್ನು ನಿಶ್ಚಯಿಸುವ ಕಾಲ. ತಮ್ಮ ಮುಂದಿನ ಭವಿತವ್ಯವನ್ನು ನಿರ್ಮಿಸುವ ಕಾಲ. ಮಾನವನು ತನ್ನ ಆಯುಷ್ಯದ ಬುತ್ತಿಗಂಟನ್ನು ಕಟ್ಟುವದು ಈ ವಯಸ್ಸಿನಲ್ಲಿಯೇ! ಈ ದೃಷ್ಟಿಯಿಂದ ಈ ಕಾಲವು ಅತ್ಯಂತ ಮಹತ್ವವಾದುದು.

ಹನುಮಂತರಾಯರಿಗೆ ಆದೇ ೧೮–೧೯ ವರುಷ. ಏರಿಕೆಯ ಹರೆ, ಮನಸ್ಸಿನಲ್ಲಿಯ ಬಗೆಬಗೆಯ ಬಯಕೆಗಳಿಗೆ ಚಿಗುರೊಡೆಯುವ ಕಾಲ ಹೊಸ ಹುಮ್ಮಸಿನಿಂದ ಪುಣೆಗೆ ಬಂದರು. ಅಭ್ಯಾಸವು ಪ್ರಾರಂಭವಾಯಿತು. ರಾಷ್ಟ್ರದಲ್ಲಿ ಆಗ ಕ್ರಾಂತಿಕಾರಕರ ಉಗ್ರ ಚಳವಳಿಯು ನಡೆದಿದ್ದಿತು. ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿದ್ದ ತರುಣರ ಮನಸ್ಸನ್ನು ಈ ಚಳವಳಿಯು ಸೆಳೆಯುವದು ಸ್ವಾಭಾವಿಕ. ಕ್ರಾಂತಿಕಾರಕ ವಿಚಾರಗಳು ರಾಯರ ತಲೆಯಲ್ಲಿ ಸುಳಿಯ ಹತ್ತಿದವು. ಫರ್ಗ್ಯುಸನ್ ಕಾಲೇಜದಲ್ಲಿ ಛಾತ್ರಾಲಯದಲ್ಲಿ ಶಿವಾಜಿ ಉತ್ಸವವನ್ನು ಮಾಡಲು ಅಧಿಕಾರಿಗಳಿಂದ ತಡೆಯುಂಟಾಯಿತು. ಅಧಿಕಾರಿಗಳ ವಿರುದ್ಧವಾಗಿ ಹೋರಾಡುವ ಪ್ರಸಂಗ ಬಂದಿತು ಹನುಮಂತರಾಯರು ಉತ್ಸವವನ್ನು ಮಾಡಿಯೇ ತೀರುವೆವೆಂದು ಹಟ ಹಿಡಿದು ಅದರ ಮುಂದಾಳುತನವನ್ನು ವಹಿಸಿದರು. ಸ್ವಾತಂತ್ರ್ಯದ ದಾಹದಿಂದ ಉತ್ತೇಜಿತರಾದ ರಾಯರು ಕ್ರಾಂತಿಕಾರರ ಗುಪ್ತವ್ಯೂಹದಲ್ಲಿ ಸೇರಿದರು. ತರುಣರನ್ನು ಸಂಘಟಿಸು

ವದು, ಕತ್ತಿ ಕಠಾರಿಗಳನ್ನು ಕೂಡಿಸುವದು, ಮದ್ದು ಗುಂಡುಗಳನ್ನು ಸಿದ್ಧಪಡಿಸುವದು, ಬಾಂಬುಗಳನ್ನು ತಯಾರಿಸುವದು ಇವೇ ಮೊದಲಾದ ಕಾರ್ಯಗಳಲ್ಲಿ ಮಗ್ನರಾದರು. ಒಮ್ಮೆ ಬಾಂಬನ್ನು ತಯಾರಿಸಿದರಂತೆ. ಆದರೆ, ಅದು ಯಶಸ್ವಿಯಾಗಿದೆ ಎಂಬುದು ತಿಳಿಯುವ ಬಗೆ ಹೇಗೆ ? ರಾಯರು ರಾತ್ರಿಯಲ್ಲಿ ಬಾಂಬನ್ನು ತೆಗೆದುಕೊಂಡು ಸ್ನೇಹಿತರೊಡನೆ ಅಡವಿಗೆ ಹೋಗಿ, ಎಲ್ಲರೂ ಮರವನ್ನೇರಿ, ಬಾಂಬನ್ನು ದೂರ ಎಸೆದರಂತೆ. ಅದು ಸ್ಫೋಟವಾಗಿ ೫೦-೬೦ ಫೂಟಿನಷ್ಟು ಸ್ಥಳವನ್ನು ದಹಿಸಿತಂತೆ, ಆ ತರಳ ಮನಸ್ಸಿಗೆ ಆದ ಆನಂದಕ್ಕೆ ಪಾರಾವಾರವೇ ಇರಲಿಲ್ಲವಂತೆ. ಜಯಶೀಲರಾದ ಯೋಧರಂತೆ ಮನೆಗೆ ಮರುಳಿದರಂತೆ. ಈ ಕತೆಯನ್ನು ಅವರೇ ಒಂದು ಸಲ ಹೇಳಿದರು. ಗಾಂಧೀ ಜೀವನದಲ್ಲಿ ತನ್ಮಯರಾದ ಹನುಮಂತರಾಯರು ಈ ಬಗೆಯಾಗಿ ಕ್ರಾಂತಿಕಾರರಿದ್ದರೆಂಬುದನ್ನು ಕೇಳಿ ಆಶ್ಚರ್ಯವಾಗಬಹುದಲ್ಲವೇ ! ಇರಲಿ. ಅವರ ಈ ಎಲ್ಲ ಚಟುವಟಿಕೆಗಳು ಅತ್ಯಂತ ಗುಪ್ತವಾಗಿದ್ದವು. ಇವೆಲ್ಲವೂ ಅಧಿಕಾರಿ ವರ್ಗಕ್ಕೆ ತಿಳಿದಿದ್ದರೆ, ರಾಯರ ವಿಶ್ವವಿದ್ಯಾಲಯದ ಶಿಕ್ಷಣವು ಅರ್ಧಕ್ಕೇ ಮುಕ್ತಾಯವಾಗುತ್ತಿದ್ದಿತು. ಆದರೆ ಈಶಸಂಕಲ್ಪ ಹಾಗಿರಲಿಲ್ಲ. ಅವರು ಕರ್ನಾಟಕದ ಮಹಾಧುರೀಣರಾಗಬೇಕಿತ್ತು. ಫರ್ಗ್ಯುಸನ್, ಹಾಗು ಮುಂಬಯಿ ಲಾ ಕಾಲೇಜಗಳಲ್ಲಿ ಬಿ ಎ ಹಾಗು ಎಲ್ ಎಲ್, ಬಿ ಶಿಕ್ಷಣ ಮುಗಿಸಿ ಪದವೀಧರರಾಗಿ ಹೊರಬಿದ್ದರು ಬುದ್ಧಿ, ಪರಿಪಕ್ವವಾಗುವ ಸಮಯ. ಇಲ್ಲಿಯವರೆಗೆ ಆಯುಷ್ಯದಲ್ಲಿ ಬಂದ ಅನುಭವಗಳನ್ನು ತೂಗಿನೋಡಿ, ಮುಂದೆ ನಾಗುವ ಸಮಯ. ಹೊಸ ಹುರುಪು ಅನುಭವಗಳಿಂದ ಮುಂದಿನ ಜೀವನದ ಸುಖಮಯ ಚಿತ್ರಗಳನ್ನು ಚಿತ್ರಿಸುತ್ತ ವಕೀಲಿಯನ್ನು ವಿಜಾಪೂರದಲ್ಲಿಯೇ ನಡೆಯಿಸಬೇಕೆಂಬ ನಿಶ್ಚಯದಿಂದ ರಾಯರು ಮರುಳಿದ್ದರು.

**ಕೌಟುಂಬಿಕ ಜೀವನ**

ಹನುಮಂತರಾಯರ ಮೊದಲನೇ ಮದುವೆಯು ಅವರ ಹದಿನೆಂಟು ವರ್ಷಕ್ಕೇ ಆಗಿತ್ತು ಎಂಬ ಮಾತು ಬಹುಜನರಿಗೆ ಆಶ್ಚರ್ಯವನ್ನುಂಟುಮಾಡಬಹುದು. ಆದರೆ ಅದು ಕಾಲಮಹಿಮೆ. ಇವರ ಮೊದಲನೇ ಮದಿವೆಯು ೧೯೧೧ ರಲ್ಲಿಯೇ ಆಯಿತು. ಆಗ ಇವರ ತಂದೆ ಶ್ರೀಪತಿರಾಯರು ಇನ್ನೂ ಇದ್ದರು. ಮುಂದೆ ಸ್ವಲ್ಪ ದಿನಗಳಲ್ಲಿಯೇ ೧೯೧೨ರಲ್ಲಿ ಅವರು ತೀರಿಕೊಂಡರು. ಹನುಮಂತರಾಯರೂ ಅವರ ತಮ್ಮಂದಿರಾದ ತಿರುಮಲರಾಯರೂ,

ಇನ್ನೂ ಕಾಲೇಜಿನಲ್ಲಿ ಓದುತ್ತಿದ್ದರು. ತಂದೆಯವರ ಮರಣದಿಂದ ಸಂಕಟವೇ ಪ್ರಾಪ್ತವಾಯಿತು. ಎಲ್ಲರ ಶಿಕ್ಷಣವು ಎಲ್ಲಿ ಅಷ್ಟಕ್ಕೆ ನಿಲ್ಲುವದೋ ಎಂಬ ಭೀತಿಯೂ ಇದ್ದಿತು. ಹನುಮಂತರಾಯರ ಮನೆತನವು ಮಧ್ಯಮ ವರ್ಗದ್ದು. ಹೊಟ್ಟೆ ಬಟ್ಟೆಗೆ ಕೊರತೆಯಿರದಿದ್ದರೂ ಇಬ್ಬರು ಮೂವರು ಕಲಿಯುವ ಖರ್ಚನ್ನು ಪೂರೈಸಲು ಶಕ್ಯವಿರಲಿಲ್ಲ. ಆದರೆ ಅವರ ಸೋದರಮಾವಂದಿರು ಧೈರ್ಯಗೊಟ್ಟು ರಾಯರ ಶಿಕ್ಷಣವನ್ನು ಪೂರ್ಣಗೊಳಿಸಿದರು.

ಮನೆತನದವರು ರಾಯರ ಬರವನ್ನೇ ಚಾತಕದಂತೆ ನಿರೀಕ್ಷಿಸುತ್ತಿದ್ದರು. ಪದವೀಧರರಾಗಿ ಬಂದೊಡನೆ ಅವರು ಮನೆಯ ಭಾರವನ್ನು ಹೊರಬೇಕಾಯಿತು. ಆದರೆ ಗ್ರಹಸೌಖ್ಯವು ಅವರ ದೈವದಲ್ಲಿ ಕಡಿಮೆಕಾಣುತ್ತದೆ. ಸ್ವಲ್ಪ ದಿನಗಳಲ್ಲಿಯೇ ಇವರ ಹೆಂಡತಿಯು ತೀರಿಕೊಂಡಳು. ಸಂಸಾರದ ಸವಿಯನ್ನು ಸವಿಯಲು ಮೊದಲನೆಯ ಮೆಟ್ಟಿಲನ್ನು ಏರುವಾಗಲೇ ರಾಯರಿಗೆ ಈ ಹೊಡೆತ ಬಿದ್ದಿತು. ರಾಯರಿಗೆ ಬಹು ದುಃಖವಾಯಿತು. ವೈರಾಗ್ಯವು ತಲೆಯೆತ್ತಿತು. ಸಂಸಾರದಲ್ಲಿ ನಿರಾಶೆಯು ಉತ್ಪನ್ನವಾಯಿತು. ವಕೀಲಿಯನ್ನು ಕೂಡ ಬಿಟ್ಟು ಬಿಟ್ಟು, ಎಲ್ಲಿಯಾದರೂ ಹೋಗಿ ಬಿಡಬೇಕೆಂಬ ಆಲೋಚನೆಯೂ ಬಂದು ಹೋಯಿತು. ಆದರೆ ತಮ್ಮ ಮೇಲೆ ಕುಟುಂಬ ಪೋಷಣೆಯ ಭಾರವಿರುವದೆಂಬ ಅರಿವು ಹಾಗೆ ಮಾಡಗೊಡಲಿಲ್ಲ ಮನಶ್ಯಾಂತಿಗಾಗಿ ಇಂಡಿಯನ್ ಡಿಫೆನ್ಸ ಫೋರ್ಸಿನಲ್ಲಿ ಸೇರಿದರು. ೬ ತಿಂಗಳ ವರೆಗೆ ಸೈನಿಕ ಶಿಕ್ಷಣ ಪಡೆದುಬಂದರು. ದಿನಗಳೆದಂತೆ, ದುಃಖದ ಮೇಲೆ ಮರವಿನ ಪಡದೆಯು ಬಿದ್ದಿತು. ಪುನಃ ವಕೀಲಿಯನ್ನು ಪ್ರಾರಂಭಿಸಿದರು

ಮೊದಲಿನಿಂದಲೂ ವಕೀಲಿಯು ಚೆನ್ನಾಗಿ ನಾಗಿದ್ದಿತು ಕುಶಾಗ್ರಬುದ್ಧಿ, ಸಾಹಸೀ ಜೀವನ, ಅಂದಮೇಲೆ ಕೇಳುವದೇನು ? ಕ್ರಿಮಿನಲ್ ಖಟ್ಲೆಗಳನ್ನು ನಡೆಯಿಸುವದರಲ್ಲಿ ಪ್ರಸಿದ್ಧಿಯನ್ನು ಪಡೆದರು. ಹುನಗುಂದ ತಾಲುಕಿನಲ್ಲಿ ವಕೀಲರೆಂದರೆ ಹನುಮಂತರಾಯರೇ ಎಂದು ಖ್ಯಾತಿ ಪಡೆದರು. ವಕೀಲಿಗೆ ಏರಿಕೆಯು ಪ್ರಾರಂಭವಾಯಿತು. ತಿಂಗಳಿಗೆ ೩೦೦–೪೦೦ ರೂಪಾಯಿಗಳ ವರೆಗೆ ಪ್ರಾಪ್ತಿಯಾಗಹತ್ತಿತು.

೧೯೨೦ರಲ್ಲಿ ಇವರು ಎರಡನೇ ಲಗ್ನವಾದರು. ಹೊಸ ಸಂಸಾರವನ್ನು ಹೂಡಿದ್ದರು. ವಕೀಲಿಯೂ ಬೆಳೆಯ ಹತ್ತಿತ್ತು. ಏಲ್ಲೆಲ್ಲಿಯೂ ಬುದ್ಧಿವಂತ

ವಕೀಲರೆಂದು ಹೆಸರು ಕೇಳಬರಹತ್ತಿತು. ಮನೆಯಲ್ಲಿ ೩೦-೩೫ ಜನ ಬಡ ವಿದ್ಯಾರ್ಥಿಗಳೇ ೧೦-೧೫ ಜನ. ಪರೋಪಕಾರವು ಮೊದಲಿನಿಂದಲೂ ನಡೆದು ಬಂದ ಮನೆತನದ ಗುಣ. ರಾಯರಿಗೆ ಈಗ ಅನುಕೂಲಕಾಲ, ಕೇಳುವದೇನು ? ೧-೨ ವರ್ಷ ಸುಖದಿಂದ ದಾಂಪತ್ಯ ಜೀವನವನ್ನು ಸಾಗಿಸಿದರು. ಸ್ತ್ರೀಯಶ್ಚರಿತ್ರಂ, ಪುರುಷಸ್ಯಭಾಗ್ಯಂ ದೇವೋನಜಾನಾತಿ ಕುತೋಮನುಷ್ಯಃ

ದೈವಲೀಲೆಯೇ ವಿಚಿತ್ರವಾದುದು. ಭಾರತದ ರಾಜಕೀಯ ಕ್ಷೇತ್ರದಲ್ಲಿ ಕಾರ್ಮೋಡಗಳು ಕವಿಯಹತ್ತಿದವು ವಾತಾವರಣವು ಗಂಭೀರವಾಗುತ್ತ ನಡೆಯಿತು. ರೌಲೆಟ್‌ಆ್ಯಕ್ಟ. ಪಂಜಾಬದ ಹತ್ಯಾಕಾಂಡ ಮೊದಲಾದ ಭಾರತಕ್ಕೆ ಅತ್ಯಂತ ಅಪಮಾನ ಕಾರಕವಾದ ಘಟನೆಗಳು ಜರುಗಹತ್ತಿದವು. ರಾಷ್ಟ್ರದ ರಾಜಕೀಯ ರಂಗವು ಪ್ರಕ್ಷುಬ್ಧವಾಯಿತು. ಕ್ರಾಂತಿಕಾರಕ ವಿಚಾರಗಳು ವಿದ್ಯುದ್ವೇಗದಿಂದ ತಿರುಗಹತ್ತಿದವು. ಮಹಾತ್ಮರು ಅಸಹಕಾರದ ಕಹಳೆಯನ್ನೂದಿದರು. ಭಾರತದಲ್ಲಿ ಕೋಲ್ಮಿಂಚು ಹೊಡೆದಂತಾಯಿತು. ಭಾರತಕ್ಕೆ ಭಾರತವೇ ಎದ್ದು ಕುಣಿಯ ಹತ್ತಿತು. ಸ್ವಾತಂತ್ರ್ಯ ಪ್ರೇಮಿಗಳಿಗೆ ಇದೊಂದು ಅಪೂರ್ವವಾದ ಯೋಗ ಒದಗಿತು. ಲಕ್ಷಾವಧಿ ತರುಣರು ಶಾಲೆ ಕಾಲೇಜುಗಳಿಗೆ ಶರಣು ಹೊಡೆದು ರಣರಂಗದಲ್ಲಿ ಧುಮುಕಿದರು. ಸಾವಿರಾರು ವಕೀಲರು ತಮ್ಮ ವೃತ್ತಿಯನ್ನು ತ್ಯಜಿಸಿ, ಹೋರಾಟದ ಹೊಣೆಯನ್ನು ಹೊರಹತ್ತಿದರು. ಇಂತಹ ಸಮಯದಲ್ಲಿ ಸ್ವಾತಂತ್ರ್ಯ ಪ್ರೇಮಿಗಳೂ, ರಾಷ್ಟ್ರಕ್ಕಾಗುವ ಅಪಮಾನವನ್ನು ಸಹಿಸದವರೂ, ದಾಸ್ಯದ ಮುಕ್ತತೆಗಾಗಿ ಹಗಲಿರುಳು ಕುದಿಯುತ್ತಿದ್ದವರೂ ಆದ ಹನುಮಂತರಾಯರ ಚೈತನ್ಯವು ಈ ಸಮಯದಲ್ಲಿ ಕುಣಿದಾಡದೆ ಬಿಟ್ಟೀತೆ ? ಅವರು ಮಹಾತ್ಮರ ಮಂತ್ರಮೋಹಿನಿಗೆ ಮುಗ್ಧರಾದರು. ಅವರ ವೀರಜೀವನಕ್ಕೆ ಮೆಚ್ಚಿದರು. ಅವರ ಕರೆಗೆ ಓಗೊಟ್ಟರು. ಮುದ್ದುಮಗು, ಸುಂದರಳಾದ ಚಿಕ್ಕ ಹೆಂಡತಿ, ಏರಿಕೆಯ ವಕೀಲಿ, ಇವೆಲ್ಲವುಗಳನ್ನು ತ್ಯಜಿಸಿ ಭಾರತಮಾತೆಯ ಆರ್ತ ಕರೆಗೆ ಓಗೊಟ್ಟು ತರುಣ ಹನುಮಂತರಾಯರು ರಣರಂಗದಲ್ಲಿ ಧುಮುಕಿದರು. ಒಂದು ದಿನ ಹನುಮಂತರಾಯರು, ಖಟ್ಲೆನಡೆಯಿಸಲು ಹುನಗುಂದಕ್ಕೆ ಹೋಗಿ ಮರಳುವಾಗ ಬಾಗಲಕೋಟೆಯಲ್ಲಿ ನಡೆದ ಸಭೆಯಲ್ಲಿ ' **ಇಂದಿನಿಂದ ನಾನು ವಕೀಲಿಯನ್ನು ಬಿಟ್ಟ**

**ಅಸಹಕಾರ ಅಂದೋಲನ**

**ದ್ದೇನೆ'** ಎಂದು ಸಾರಿ ಎಲ್ಲರನ್ನೂ ಚಕಿತಗೊಳಿಸಿದರು. ಅದೇ ಸಭೆಯಲ್ಲಿದ್ದ ಇವರ ಸೋದರಮಾವಂದಿರಾದ ಬೆಳಗಲ ಗೋವಿಂದರಾಯರು ಈ ಭೀಷ್ಮ ಪ್ರತಿಜ್ಞೆಯನ್ನು ಕೇಳಿ, ದಿಗ್ಭ್ರಮೆಗೊಂಡರು. ಅಪ್ತೇಷ್ಟರು ಪರಿಪರಿಯಿಂದ ಪ್ರತಿಜ್ಞೆಯನ್ನು ಭಂಗಗೊಳಿಸಲು ಯತ್ನಿಸಿದರೂ ರಾಯರು ತಮ್ಮ ನಿಶ್ಚಯ ವನ್ನು ಬದಲಿಸಲಿಲ್ಲ ಇದೇ ದೊಡ್ಡಮನುಷ್ಯರ ಲಕ್ಷಣವಲ್ಲವೇ ! ಹನುಮಂತ ರಾಯರಂತೆಯೇ ಕರ್ನಾಟಕದಲ್ಲಿ ತೇಜಸ್ವಿಗಳಾದ ಅನೇಕ ತರುಣರು ಹೊರ ಬಿದ್ದರು. ದಿವಾಕರರಂಗರಾಯರೂ, ಮಜಲೀದತ್ತೋಪಂತರೂ, ಜಯರಾವ ದೇಶಪಾಂಡೆ, ಕರಗುಪ್ಪಿಕರ ಕಪಪಾ ಮೊದಲಾದ ಪದವೀಧರರು ಆ ಕಾಲಕ್ಕೆ ಮುಂದೆ ಬಂದರು. ತಮ್ಮ ಕರ್ತೃತ್ವ ಶಕ್ತಿಯಿಂದಲೂ ಕುಶಾಗ್ರ ಬುದ್ಧಿಯಿಂದಲೂ, ದಿವಾಕರ–ಮಜಲಿ, ಕೌಜಲಗಿ ಹನುಮಂತರಾಯರು ಜನರ ಅಂತಃಕರಣವನ್ನು ತಮ್ಮ ಕಡೆಗೆ ಸೆಳೆದುಕೊಂಡರು. **ಈ ತ್ರಿಮೂರ್ತಿಗಳ ಕೀರ್ತಿಯು ಎಲ್ಲೆ** ಲ್ಲೆಯೂ ಹರಡಿತು. ಕರ್ನಾಟಕದ ತರುಣರ ಮೇಲೆ, ಮುಂದಾಳುತನದ ಮುದ್ರೆಯನ್ನೊತ್ತಿತು. ಈ ತ್ರಿಮೂರ್ತಿಗಳ ಪ್ರಭಾವದಿಂದ ಕರ್ನಾಟಕದ ಹಳ್ಳಿ, ಪಳ್ಳಿಗಳಲ್ಲಿ ಸಹ ರಾಷ್ಟ್ರೀಯತೆಯು ಹಬ್ಬಿತು. ಕನ್ನಡ ನಾಡು ಜಾಗೃತ ವಾಯಿತು.

ಅಸಹಕಾರದ ಯುಗವು ಭಾರತೀಯರ ಜೀವನದಲ್ಲಿ ಒಂದು ಪರ್ವಕಾಲ. ಭಾರತೀಯರಲ್ಲಿದ್ದ ಸುಷುಪ್ತ ಶಕ್ತಿಗಳೆಲ್ಲ ಜಾಗೃತವಾಗುವ ಸಮಯ.

**ಗಾಂಧೀ ಟೊಪ್ಪಿಗೆಯ ವೀರರು**

ರಾಯರು ವಕೀಲಿಯನ್ನು ಬಿಟ್ಟು ಮನೆಯಲ್ಲಿ ಕುಳಿತರೆ? ಗಾಂಧೀಜಿಯವರ ಸಂದೇಶವನ್ನು ಬೀರಲು ಹಳ್ಳಿಗೆ ಹೊರಟರು. ತಮ್ಮ ವಾಗ್ಝರಿ ಯಿಂದ ದೇಶಪ್ರೇಮವನ್ನು ಜಾಗೃತಗೊಳಿಸಿ, ಜನರನ್ನು ರಾಷ್ಟ್ರಕಾರ್ಯಕ್ಕಾಗಿ ಹುರಿದುಂಬಿಸಹತ್ತಿದ್ದರು. ತರುಣರು ತಂಡ ತಂಡವಾಗಿ ಇವರ ಬೆನ್ನುಹತ್ತಿ ಹತ್ತಿದರು. ಎಲ್ಲಿ ನೋಡಿದಲ್ಲಿ ರಾಯರಿಗೆ ಸ್ವಾಗತವಾಗಹತ್ತಿತು. ಇದನ್ನು ಪರದೇಶಿ ಸರಕಾರವು ಸಹಿಸುವದೆಂತು? ರಾಯರನ್ನು ಶೆರೆಮನೆಗೆ ಕಳಿಸುವ ಸಂಕಲ್ಪ ಮಾಡಿ, ರಾಜದ್ರೋಹದ ಖಟ್ಲೆ ಯನ್ನು ಹಾಕಿತು. ಇದು ಶತ್ರುವಿನ ಅಪಜಯವೆಂದು ತಿಳಿದ ರಾಯರು ಇಮ್ಮಡಿ ಹುರುಪಿನಿಂದ ಕಾರ್ಯಮಾಡಹತ್ತಿದರು.

ಅಸಹಕಾರದ ದೀಕ್ಷೆಯನ್ನು ವಹಿಸಿದೊಡನೆ ರಾಯರ ವೇಷಭೂಷಣಗಳೂ ಬದಲಾಗಿದ್ದವು. ಅವರು ಖಾದಿಧಾರಿಗಳಾಗಿ, ಗಾಂಧಿಟೊಪ್ಪಿಗೆಯನ್ನು ಧರಿಸುತ್ತಿದ್ದರು. ಖಟ್ಲೆಯು ಪ್ರಾರಂಭವಾಯಿತು. ಕೋರ್ಟಿಗೆ ಹೋದರು. ಈ ವರೆಗೂ ಗಾಂಧೀ ಟೊಪ್ಪಿಗೆಯಿಂದ ಕೋರ್ಟಿಗೆ ಯಾರೂ ಹೋಗಿರಲಿಲ್ಲ. ಜಜ್ಜರಿಗೆ ಅದನ್ನು ಕಂಡು ಸಹನವಾಗಲಿಲ್ಲ. ಹನುಮಂತರಾಯರಿಗೆ ಹೊರಹೋಗಿ, ಗಾಂಧೀಟೊಪ್ಪಿಗೆಯನ್ನು ತೆಗೆದಿಟ್ಟು ಬರಲು ಹೇಳಿದರು. ರಾಯರು ಹೊರಹೋಗಿ ಬಂದರೆ ವಿನಃ ಟೊಪ್ಪಿಗೆಯನ್ನು ತೆಗೆಯಲಿಲ್ಲ. ಇದರಿಂದ ಕೋರ್ಟಿಗೆ ಅಪಮಾನವಾಯಿತೆಂದೂ ಇದಕ್ಕಾಗಿ ಹೆಚ್ಚಿನ ಶಿಕ್ಷೆ ವಿಧಿಸಬೇಕಾಗುತ್ತದೆ ಎಂದೂ ಬೆದರಿಕೆ ಹಾಕಲಾಯಿತು. ಇಂತಹ ಬೆದರಿಕೆಗೆ ಬೆದರುವವರೇ! ನಮ್ಮ ಬಂಟರು! ತಮಗೆ ಸರಿಕಂಡದ್ದನ್ನು ಮಾಡುವದು ಬಿಡುವದಿಲ್ಲೆಂದು ರಾಯರು ಗರ್ಜಿಸಿದರು. ಜಜ್ಜನು ಮತ್ತೆ ಅದೇ ಮಾತನ್ನು ಹೇಳಿದನು ರಾಯರು ಟೊಪ್ಪಿಗೆಯನ್ನು ತೆಗೆಯಲಿಲ್ಲ. ಕೊನೆಗೆ ಜಜ್ಜರು 'ರಾಯರೆ ಹುಚ್ಚುಹಟಕ್ಕೆ ಬೀಳಬೇಡಿರಿ, ನಿಮ್ಮ ವಕೀಲಿಯೂ ಏರಿಕೆಯಲ್ಲಿದೆ, ನೀವು ಬಯಸಿದರೆ ನಾಳೆ ನ್ಯಾಯಾಧೀಶರಾಗಬಹುದು. ಏಕೆ ಈ ಚಳವಳಿಯಲ್ಲಿ ಸೇರಿ ಆಯುಷ್ಯವನ್ನು ಹಾಳು ಮಾಡಿಕೊಳ್ಳುವಿರಿ, ಎಂದು ಆಶೆ ತೋರಿಸಿದರು ಇಂಥ ಆಮಿಷಗಳಿಗೆ ಮರುಳಾಗುವ ಹುಚ್ಚನಾನಲ್ಲವೆಂದು ಹನುಮಂತರಾಯರು ಉತ್ತರಿಸಿದರು. ರಾಯರ ಧೈರ್ಯ ತ್ಯಾಗಗಳನ್ನು ಕಂಡು ವಕೀಲರು ಬೊಟ್ಟುಕಚ್ಚಿದರು. ರಾಯರಿಗೆ ೧ವರ್ಷ ಸಶ್ರಮ ಶಿಕ್ಷೆ೬೦೦ ರೂ. ದಂಡ ವಿಧಿಸಲ್ಪಟ್ಟಿತು. ಇದರಿಂದ ಸರಕಾರದ ಇಚ್ಛೆಯು ಮಾತ್ರಫಲಿಸದೆ ವಿಪರೀತವಾಯಿತು ಅಂದಿನಿಂದ ಹನುಮಂತರಾಯರು ಗಾಂಧೀಟೊಪ್ಪಿಗೆಯ ವೀರರೆಂದು, ಭಾರತದಲ್ಲೆಲ್ಲ ಪ್ರಸಿದ್ಧರಾದರು. ಈ ಸುದ್ದಿಯು ಬೆಳಗಾಗುವದರೊಳಗೆ ಭಾರತದಲ್ಲೆಲ್ಲ ಹರಡಿತು. ದೇ. ಭ. ಲಾಲಾಲಜಪತರಾಯರು ಇದನ್ನು ಕೇಳಿ ಪೇಟಾ ಬಿಟ್ಟು ಗಾಂಧಿಟೊಪ್ಪಿಗೆಯನ್ನು ಧರಿಸಹತ್ತಿದರು. ಊರಲೆಲ್ಲ ಎಲ್ಲಿ ನೋಡಿದಲ್ಲಿ ಗಾಂಧೀ ಟೊಪ್ಪಿಗೆಗಳೇ ಕಾಣಹತ್ತಿದವು ವಕೀಲರೂ ಗಾಂಧಿಟೊಪ್ಪಿಗೆಗಳನ್ನು ಧರಿಸಿ ಕೋರ್ಟಿಗೆ ಬರಹತ್ತಿದರು. ಮಕ್ಕಳು **ಗಾಂಧೀ ಟೊಪ್ಪಿಗೆಯ ವೀರ ಹನುಮಂತರಾಯ** ಎಂದು ಘೋಷಿಸುತ್ತ ಮೆರವಣಿಗೆಯನ್ನು ತೆಗೆದರು.

ಕಸ್ತೂರಿಯನ್ನು ಎಲ್ಲಿಟ್ಟರೇನು ತನ್ನ ಕಂಪನ್ನು ಬೀರದೆ ಬಿಟ್ಟೀತೆ? ಮಲ್ಲಿಗೆಯು ಎಲ್ಲಿ ಅರಳಿದರೇನು, ತನ್ನ ಪರಿಮಳವನ್ನು ಹರಡದೆ ಇದ್ದೀತೆ!

**ಕೈದಿಗಳ ಕೈವಾರಿ** ಶಿಕ್ಷೆಯಾದ ನಂತರ ರಾಯರನ್ನು ವಿಸಾಪೂರಜೇಲಿಗೆ ಕಳಿಸಲಾಯಿಯಿತು. ಇಂದು ವಿಸಾಪೂರವು ಅರಮನೆಯಂತೆ ಕಂಡರೂ ಅಂದು ಪ್ರತ್ಯಕ್ಷ ನರಕ. ಅಲ್ಲಿಯ ಕೈದಿಗಳನ್ನು ಸರಕಾರ ಜನವೆಂದೇ ತಿಳಿದಿದ್ದಿಲ್ಲ. ಜೇಲು ಭದ್ರವಿಲ್ಲೆಂದು ದನಗಳ ಡಾವಣಿ ಹೊಡೆಯುವಂತೆ, ಕೈದಿಗಳ ಕಾಲಿಗೆಲ್ಲ ಒಂದೇ ಸರಪಳಿಯನ್ನು ಬಿಗಿದು ಕಂಬಗಳಿಗೆ ಕಟ್ಟಿ ಮಲಗಿಸುತ್ತಿದ್ದರಂತೆ. ಮಲಮೂತ್ರಗಳಿಗೂ ಅವರು ಪರಾಧೀನ, ಆಹಾರವಂತೂ ಕಸವಕಿಂತಲೂ ಕಡೆ, ದುಡಿತವಾದರೋ ಪಶುಗಳಿಗಿಂತ ಹೆಚ್ಚಿನದು ವಿಸಾಪೂರ ಕೆರೆಯನ್ನು ಕಟ್ಟುವ ಕಾರ್ಯ ನಡೆದಿತ್ತಂತೆ. ಎಷ್ಟೋ ಕೈದಿಗಳನ್ನು ಜೀವಂತಲೇ ಒಡ್ಡಿನಲ್ಲಿ ಹಾಕಿ ಮುಚ್ಚಿದ ಕಥೆಗಳೂ ಉಂಟು. ಇಂತಹ ಯಮಯಾತನೆಯನ್ನೂ ಅನ್ಯಾಯವನ್ನೂ ಸ್ವಾಭಿಮಾನಿಗಳಾದ ಹನುಮಂತರಾಯರು ಸಹಿಸುವದೆಂತು? ಅಲ್ಲಿ ಹೋದೊಡನೆ ಕೈದಿಗಳನ್ನು ಸಂಘಟಿಸಿಸಿದರು. ಮೊದಲು ಅವರಿಗೆ ಒಳ್ಳೇ ರೀತಿಯಿಂದ ಇರಲು ಬೋಧಿಸಿದರು, ಅಧಿಕಾರಿಗಳಿಗೆ ಮನುಷ್ಯರಂತೆ ನಡೆಯಿಸಿಕೊಳ್ಳಲು ಹೇಳಹತ್ತಿದರು. ಕೈದಿಗಳ ಕೈವಾರಿಗಳಾಗಿ ಹೋರಾಡಹತ್ತಿದರು ಜೇಲಿನಲ್ಲಿ ನಡೆದ ಅನ್ಯಾಯಗಳನ್ನೆಲ್ಲ ಸಂಗ್ರಹಿಸಿ, ಅಂಕೆ ಸಂಖೆಗಳೊಂದಿಗೆ, ಸರಕಾರಕ್ಕೆ ತಿಳಿಸಿದರು. ರಾಯರಂಥವರು ಇದರ ಬೆನ್ನು ಹತ್ತಿದ ಮೂಲಕ ಸರಕಾರವು ಕಣ್ಣು ತೆರೆಯಿತು. ವಿಚಾರಣಾ ಕಮೀಟಿಯು ಬಂದು, ಅಲ್ಲಿ ನಡೆದ ಅನನ್ವಿತ ಕೃತ್ಯಗಳೆಲ್ಲ ಬಯಲಾಗಿ, ಜೇಲು ಸುಧಾರಣೆಯಾಯಿತು. ಜೇಲಧಿಕಾರಿಗಳೂ, ಬುದ್ಧಿ ಗಲಿತರು.

ಹನುಮಂತರಾಯರಿಗೆ ಜೇಲಿನಲ್ಲಿ ಏಕಾಂತವಾಸವು ದೊರಕಿದುದರಿಂದ ರಾಷ್ಟ್ರ, ರಾಷ್ಟ್ರಸೇವೆ ಎಂದರೇನು ಎಂಬುದರ ಬಗೆಗೆ, ದೀರ್ಘವಿಚಾರ ಮಾಡಿ ನಿಶ್ಚಿತ ಅಭಿಪ್ರಾಯಗಳಿಗೆ ಬರಲು ಅನುಕೂಲವಾಯಿತು.

**ಮರಳಿ ಮನೆಗೆ** ಅವರು ಹೊರಗೆ ಬರುವಾಗ ಗಾಂಧಿಜಿಯವರು ಬಂಧಿಸಲ್ಪಟ್ಟಿದ್ದರು. ಅಸಹಕಾರವು ಹಿಮ್ಮೆಟ್ಟಹತ್ತಿತ್ತು. ಕಾಂಗ್ರೆಸ್ಸಿನಲ್ಲಿ ಇಬ್ಬಣಗಳಾಗಿದ್ದವು ನಿರುತ್ಸಾಹವು ಜನರಲ್ಲಿ ತನ್ನ ಪ್ರಭಾವ

ವನ್ನು ಬೀರುತ್ತಲಿದ್ದಿತು. ಜೇಲಿನಲ್ಲಿದ್ದರೂ, ಅತ್ಯಂತ ಪ್ರೇಮಲಸ್ವಭಾವದವರಾದ ಹನುಮಂತರಾಯರು ಹೆಂಡರು ಮಕ್ಕಳ ಯೋಗಕ್ಷೇಮದ ಬಗೆಗೆ ಯಾವಾಗಲೂ ವಿಚಾರಿಸುತ್ತಿದ್ದರು. ತಮ್ಮ ಅಗಲುವಿಕೆಯಿಂದ ಕೋಮಲಮನದ ಪತ್ನಿಯಮೇಲೆ ಏನು ಪರಿಣಾಮವಾಗುವದೊ ಎಂದು ಆಲೋಚನಾಪರರಾಗುತ್ತಿದ್ದರು. ಅದರಲ್ಲಿಯೂ ಜೇಲಿನಲ್ಲಿರುವಾಗಲೇ ಮಗನ ಜನ್ಮವೂ ಆಗಿದ್ದಿತು. ಆದರೆ ತಾನೊಂದು ಬಗೆದರೆ, ದೈವವು ಮೊತ್ತೊಂದು ಬಗೆಯುವಂತೆ ರಾಯರು ಬಿಡುಗಡೆಯಾಗುವ ಕಾಲದಲ್ಲಿ ಅವರ ಪ್ರಿಯ ಪತ್ನಿಯು ಕ್ಷಯಪೀಡಿತಳಾಗಿದ್ದಳು. ಈ ಸುದ್ದಿಯನ್ನು ಕೇಳಿದೊಡನೆಯೇ ರಾಯರು ಝರ್ರೆಂದು ಇಳಿದರು. ಎರಡು ಲಗ್ನವಾದರೂ ತಮ್ಮ ದೈವದಲ್ಲಿ ಗ್ರಹ ಸೌಖ್ಯವಿಲ್ಲೆಂದು ಬಗೆದು, ಕೂಡಲೇ ಮನಸ್ಸನ್ನು ಘಟ್ಟಿಮಾಡಿಕೊಂಡು ದೇಶಕಾರ್ಯದಲ್ಲಿ ನಿರತರಾದರು. ಪತ್ನಿಯ ಮನಸ್ಸನ್ನು ನೋಯಿಸಿದೆ, ಅವರ ಶುಶ್ರೂಷೆಯನ್ನು ಅತ್ಯಂತ ಸಮಾಧಾನಚಿತ್ತದಿಂದ ಮಾಡಿದರು. ಆ ಬಗೆಗೆ ಇದ್ದ ತಮ್ಮ ಕರ್ತವ್ಯವನ್ನು ಮುಗಿಸಿದರು. ಮುಂದೆ ಕೆಲದಿನಗಳಲ್ಲಿಯೇ ಪತ್ನಿಯು ತೀರಿಕೊಂಡಳು. ಮಗುವು ಅನಾಥವಾಯಿತು ಸಾಲದ ಭಾರವು ಮೈಮೇಲೆ ಇದ್ದಿತು. ಬಡತನವಂತೂ ಬೆನ್ನೇ ಹತ್ತಿತ್ತು. ತಮ್ಮಂದಿರ ಮಾರ್ಗದರ್ಶನದ ಹೊಣೆಯೂ ಅವರ ಮೇಲೆಯಿದ್ದಿತು. ಇಷ್ಟೆಲ್ಲ ಪರಿಸ್ಥಿತಿಯಿದ್ದರೂ ಅವರ ದೇಶ ಸೇವೆಯ ನಿರ್ಧಾರವು ಕದಲಲಿಲ್ಲ. ಹಣಗಳಿಸುವ ಮೋಹವು ಅವರಿಗೆ ಉತ್ಪನ್ನವಾಗಲಿಲ್ಲ. **ಇದಲ್ಲವೇ ಹನುಮಂತರಾಯರ ದಿವ್ಯ ಜೀವನ !** ದೊಡ್ಡವರ ಮಾತು ದೊಡ್ಡದೇ. ಅದಕ್ಕೆ ಈಶ ಕೃಪೆಬೇಕು.

ಹನುಮಂತರಾಯರು ಅತ್ಯಂತ ನಿರುತ್ಸಾಹದ ವಾತಾವರಣದಲ್ಲಿ ಹೊರಬಿದ್ದರಷ್ಟೇ. ಅಂತಹ ಸಮಯದಲ್ಲಿ ಅವರೇನು ಮಾಡುವರೆಂಬುದರ ಕಡೆಗೆ,

**ಖಾದೀಹುಚ್ಚ ಖದ್ದರ ಕೌಜಲಗಿ**

ಎಲ್ಲರ ದೃಷ್ಟಿಯಿದ್ದಿತು. ಅವರು ಪೂರ್ಣವಾಗಿ ಗಾಂಧೀವಾದಿಗಳಾಗಿದ್ದರು. ಆಂದೋಲನದ ಸಮಯದಲ್ಲಿ ಹಳ್ಳಿಗಳನ್ನು ಸುತ್ತುವಾಗ ದೀನ ದರಿದ್ರಳಾದ ಭಾರತಮಾತೆಯ ದರ್ಶನವಾಗಿದ್ದಿತು. ದೇಶದ ಉದ್ಧಾರವೆಂದರೆ ಹಳ್ಳಿಗಳ ಉದ್ಧಾರವೆಂಬ ಮಹಾತ್ಮರ ನುಡಿಯ ಸತ್ಯತೆಯನ್ನು ಪೂರ್ಣವಾಗಿ ಮನಗಂಡಿದ್ದರು. ವಿಧಾಯಕ ಕಾರ್ಯಕ್ರಮಗಳಲ್ಲಿಯೇ ರಾಷ್ಟ್ರಸಂವರ್ಧನೆಯು

ಶಕ್ತಿ ಇರುವದೆಂದು ಇವರಿಗೆ ಪೂರ್ಣ ಮನವರಿಕೆಯಾಗಿದ್ದಿತು. ನಿರುತ್ಸಾಹದ ಮಡುವಿನಲ್ಲಿ ಮುಳುಗುತ್ತಿರುವ ಭಾರತಕ್ಕೆ ವಿಧಾಯಕ ಕಾರ್ಯಕ್ರಮವೊಂದೇ ಸಂಜೀವಿನಿ ಎಂದು ಬಗೆದು, ಹಳ್ಳಿಗಳತ್ತ ತಮ್ಮ ಮನಸ್ಸನ್ನು ಹೊರಳಿಸಿದರು. ರಾಜಕಾರಣದ ತರುವಾಯ ಹಳ್ಳಿಗರ ಸೇವೆಯೇ ಅವರ ಪ್ರೀತಿಯ ವಿಷಯ ವಾಗಿದ್ದಿತು. ಹಾಳಾಗುತ್ತಿರುವ ಹಳ್ಳಿಗಳ ಪುನರುಜ್ಜೀವನ ಹೇಗಾದೀತೆಂಬುದೇ ಅವರ ಅಂತಃಕರಣದ ಕಳವಳ. ಇದೇ ಅವರನ್ನು ಖಾದೀ ಕಾರ್ಯಕ್ಕೆ ಪ್ರೇರೇ ಪಿಸಿತು. ಗ್ರಾಮೋದ್ಯೋಗಗಳ ಪುನರುಜ್ಜೀವನಕ್ಕೆ ಅವರನ್ನು ಸೆಳೆಯಿತು. ಯಾವುದೇ ಕಾರ್ಯವನ್ನು ಕೈಕೊಳ್ಳಲಿ ಅದರಲ್ಲಿ ತನ್ಮಯರಾಗುವುದು ಅವರ ಹುಟ್ಟುಗುಣ. ಹಳ್ಳಿಗರ ಜೀವನದಲ್ಲಿ, ಅವರ ಸುಖದುಃಖದಲ್ಲಿ ಮುಳುಗಿ ಬಿಟ್ಟರು. ಕರ್ನಾಟಕದ ಹಳ್ಳಿಗಳ ದೈವವು ತೆರೆಯಿತು. ಖಾದಿಯ ಕಾರ್ಯಕ್ಕೆ ಕೈ ಹಾಕಿದರು. ಎದ್ದರೆ ಖಾದಿ, ಕುಳಿತರೆ ಖಾದಿ, ಖಾದಿ ಖಾದಿ ಎಂದು ಯಾವಾಗಲೂ ಅದೇ ವಿಷಯದಲ್ಲಿ ಮಗ್ನರಾದರು. ಹಳ್ಳಿಗಳಲ್ಲಿ ಕ್ರಾಂತಿ ಯನ್ನೇ ಉಂಟುಮಾಡಿದರು. ದೇಶಾಭಿಮಾನದ ಕುರುನಗೆಯು ಹಳ್ಳಿಗಳಲ್ಲಿ ಮಿನುಗಹತ್ತಿತು. ಕಾಂಗ್ರೆಸ್ಸು ಕರ್ನಾಟಕದಲ್ಲಿ ನೇರತಕ್ಕದ್ದಿದ್ದಿತು ಸ್ಥಳದ ವಿಷಯವಾಗಿ, ತಿಕ್ಕಾಟವು ಪ್ರಾರಂಭವಾಗಿತ್ತು. ಬೆಳಗಾವಿಯ ಸಮಾವೇಶವು ಕರ್ನಾಟಕದಲ್ಲಿ ಆಗಬೇಕೆಂಬ ಮುಂಧೋರಣದ ಹನುಮಂತರಾಯರು ದೇ.ಭ. ಗಂಗಾಧರರಾಯರಿಗೆ ಬೆಂಬಲವಿತ್ತರು. ಬೆಳಗಾವಿ ಕಾಂಗ್ರೆಸ್ಸಿನ ಕಾಲಕ್ಕೆ ಕೂಡಿದ ಅ. ಭಾ. ಗ್ರಾಮೋದ್ಯೋಗ ಪ್ರದರ್ಶನದ ಪ್ರಧಾನ ಕಾರ್ಯದರ್ಶಿ ಗಳಾಗಿ, ಅದನ್ನು ಅತ್ಯಂತ ಯಶಸ್ವಿಯಾಗಿ ಮಾಡಿ ತೋರಿಸಿದರು. ಮಹಾತ್ಮರ ಕಲ್ಪನೆಗಳಿಗೆಲ್ಲ ಮೂರ್ತಸ್ವರೂಪ ಕೊಡಬೇಕೆಂಬುದೇ ಅವರ ಪ್ರಯತ್ನವಾಗಿ ದ್ದಿತು. ಅಲ್ಲದೆ ಈ ಬಗೆಯ ಪ್ರದರ್ಶನವು ಅಖಿಲ ಭಾರತದಲ್ಲಿಯೇ ಮೊದಲ ನೆಯವಾಗಿದ್ದಿತು. ರಾಯರು ಅತ್ಯಂತ ಶ್ರಮವಹಿಸಿ, ಅದು ಸರ್ವಾಂಗ ಪರಿ ಪೂರ್ಣವಾಗುವಂತೆಯೂ ಮನಮೋಹಕವಾಗುವಂತೆಯೂ ಸಂಘಟಿಸಿದ್ದರು. ಮಹಾತ್ಮರು ಕೌಜಲಗಿಯವರ ಕಾರ್ಯಕುಶಲತೆಯನ್ನೂ ಸಂಘಟನಾ ಶಕ್ತಿ ಯನ್ನೂ ಹೊಗಳಿದರು. ಅಂದಿನಿಂದ ಕೌಜಲಗಿಯವರು ಮಹಾತ್ಮರ ಅಚ್ಚು ಮೆಚ್ಚಿನ ಶಿಷ್ಯರಾದರು.

ಖಾದೀ ಕಾರ್ಯವನ್ನು ಸಂಘಟಿಸುವದರಲ್ಲಿ ಅವರು ಪೂರ್ಣವಾಗಿ ತನ್ಮಯರಾಗಿದ್ದರು. ಅ. ಭಾ. ಚರಖಾಸಂಘದ ಎಜೆಂಟರೆಂದು ಗಂಗಾಧರರಾಯರು ಇದ್ದರೂ ಪೂರ್ಣ ಹೊಣೆಯನ್ನು ಹನುಮಂತರಾಯರೇ ಹೊತ್ತಿದ್ದರು. ಅವರು ಹೆಸರಿಗೆ ಮಾತ್ರ. ಹನುಮಂತರಾಯರು ಖಾದೀ ಕಾರ್ಯದಲ್ಲಿ ದುಡಿದಷ್ಟು ಇನ್ನಾವ ಕಾರ್ಯದಲ್ಲಿಯೂ ದುಡಿದಿಲ್ಲ. ಖಾದಿಯ ವಿಷಯದಲ್ಲಿ ಅವರಿಗಿದ್ದಷ್ಟು ಜ್ಞಾನವು ಇನ್ನಾರಿಗೂ ನಮ್ಮ ಪ್ರಾಂತದಲ್ಲಿ ಇದ್ದಿಲ್ಲವೆಂದು ಹೇಳಬಹುದು. ೪ ೬ ವರುಷಗಳಲ್ಲಿಯೇ ಖಾದಿಯ ಮುಖಾಂತರ ಕರ್ನಾಟಕದ ಹಳ್ಳಿಗಳಲ್ಲಿ ನವಜೀವನವನ್ನು ತುಂಬಿದರು. ಅನೇಕ ಖಾದೀ ಕೇಂದ್ರಗಳು ತೆರೆಯಲ್ಪಟ್ಟವು. ನೂಲುವ ಮಂದ್ಯಾಟಗಳು ಪ್ರಾರಂಭವಾದವು. ಬಣ್ಣದ ಕಾರ್ಖಾನೆಗಳು ತೆರೆಯಲ್ಪಟ್ಟವು. ೪–೬ ವರುಷಗಳಲ್ಲಿಯೇ ಖಾದೀ ಹುಟ್ಟುವಳಿಯು ೬–೮ ಲಕ್ಷಕ್ಕೆ ಮುಟ್ಟಿತು. ಉಪ್ಪಿನಬೆಟಗೇರಿಯ ಕೋಟಿನರಿವೆಯೂ ಗದ್ವಾಲದ ನಯವಾದ ಸೀರೆಗಳೂ, ಗುರ್ಲಹೊಸೂರಿನ ಖಾದೀ ಧೋತರಗಳೂ ಭಾರತದಲ್ಲಿಯೇ ಪ್ರಸಿದ್ಧಿಯನ್ನು ಪಡೆದವು ೫ ೬ ಸಾವಿರ ಹಳ್ಳಿಗರ ಉಪಜೀವನಕ್ಕೆ ಮಾರ್ಗವಾಯಿತು ಹಳ್ಳಿಗರು **ನಮ್ಮಪ್ಪ ಹನುಮಪ್ಪ** ಎಂದು ಬೆನ್ನು ಹತ್ತಿದರು. ಶಹರದಲ್ಲಿಯ ಮಿತ್ರರು ಖಾದೀ ಹುಚ್ಚನೆಂದು ಚೇಷ್ಟೆ ಮಾಡಹತ್ತಿದರು. ಭಾರತದಲ್ಲಿಯ ಜನ ಇವರನ್ನು ಖದ್ದರ ಕೌಜುಲಗಿ ಎಂದು ಗುರುತಿಸಹತ್ತಿದರು. ಖಾದಿಯ ಮುಖಾಂತರವೇ ಹನುಮಂತರಾಯರು ಭಾರತದಲ್ಲೆಲ್ಲ ಪ್ರಸಿದ್ಧರಾದರು ಈ ಕಾರ್ಯದಲ್ಲಿಯೇ ಅವರ ಕಾರ್ಯಕುಶಲತೆ, ಸಂಘಟನಾಸಾಮರ್ಥ್ಯ, ಕುಶಾಗ್ರಬುದ್ಧಿ ಮೊದಲಾದ ಸದ್ಗುಣಗಳು ಪ್ರಕಟವಾದವು. ಚರಖಾ ಸಂಘದ ಕಾರ್ಯವು ಅಭೂತಪೂರ್ವವಾದುದು.

**ನವಕರ್ನಾಟಕದ ನಿರ್ಮಾತೃಗಳು**

೧೯೨೩ ರಿಂದ ೨೮ ರ ವರೆಗಿನ ಕಾಲವು ರಾಷ್ಟ್ರದ ದೃಷ್ಟಿಯಿಂದ ಅತ್ಯಂತ ಮಹತ್ವವಾದ ಕಾಲ. ರಾಷ್ಟ್ರದಲ್ಲಿ ಚೈತನ್ಯವನ್ನು ತುಂಬಿ ಮತ್ತೆ ಹೋರಾಟಕ್ಕೆ ಅಣಿಗೊಳಿಸಬೇಕಿದ್ದಿತು ರಾಷ್ಟ್ರದ ನಾಳನಾಳಗಳಲ್ಲಿ ರಾಷ್ಟ್ರೀಯತೆಯನ್ನು ಹಬ್ಬಿಸಿ ಅದರಲ್ಲಿ ಶಕ್ತಿ ಸಾಮರ್ಥ್ಯ ತುಂಬಬೇಕಾಗಿದ್ದಿತು. ರಣೋತ್ಸಾಹದಲ್ಲಿ ಮೈದುಂಬಿ ಹೋರಾಡುವವರು ಬಹುಜನ. ಆದರೆ ಶಾಂತ ಕಾಲದಲ್ಲಿ ಅಭಿಮಾನದ ಇಳಿಕೆಯ ಕಾಲದಲ್ಲಿ, ಉಚ್ಚ ಧ್ಯೇಯದಿಂದ ಉತ್ತೇಜಿತರಾಗಿ

ತಮ್ಮ ಬೆವರನ್ನು ಕ್ಷಣ ಕ್ಷಣಕ್ಕೆ ಸುರಿಸುತ್ತ ರಾಷ್ಟ್ರ ನಿರ್ಮಾಣ ಮಾಡುವ ಕಾರ್ಯವು ಯುದ್ಧಕ್ಕಿಂತಲೂ ದೊಡ್ಡದೆಂಬ ಮಾತನ್ನು ಸಾಮಾನ್ಯ ಜನ ಅರಿತಿಲ್ಲ. ಈ ಕಾರ್ಯವು ಸಾಮಾನ್ಯವಲ್ಲ. ಇದನ್ನು ಸಾಧಿಸಲು ಅಸಾಮಾನ್ಯ ಪುರುಷರೇ ಬೇಕು.

ದೊಡ್ಡ ಮಳೆಯಾದ ನಂತರ ಸಣ್ಣ ಪುಟ್ಟ ಜೀವ ಜಂತುಗಳು ಮಾಯ ವಾಗುವಂತೆ, ಅಸಹಕಾರದ ಆಂದೋಲನವು ಮುಂದವಾದ ನಂತರ ಸಾಮಾನ್ಯ ಜನ ಹಿಮ್ಮೆಟ್ಟಿತು. ಶ್ರೀ. ಮುಜಲೀ ದತ್ತೋಪಂತರು ಕಾರಣಾಂತರಗಳಿಂದ ರಾಜಕೀಯ ರಂಗದಿಂದ ಹಿಂದೆ ಸರಿದಿದ್ದರು. ದಿವಾಕರರು ಸೆರೆಯಲ್ಲಿದ್ದರು. ಇಂತಹ ಸಮಯದಲ್ಲಿ ರಾಯರು ಧೈರ್ಯದಿಂದ ಮುಂದಡಿಯಿಟ್ಟುದು ಸಾಮಾನ್ಯವಲ್ಲ. ಅದಕ್ಕೆ ಅಂತಹ ಯೋಗ್ಯತೆಯೇ ಬೇಕು. ಇದೇ ಸಮಯಕ್ಕೆ ಡಾ. ಹರ್ಡೀಕರರೂ ಕರ್ನಾಟಕದ ಕ್ಷಿತಿಜದಲ್ಲಿ ಹೊಳೆಯಹತ್ತಿದ್ದರು. ಕೆಲ ದಿನಗಗಲ್ಲಿಯೇ ದಿವಾಕರರೂ ಹೊರಬಂದರು. ಈ ಸಮಯದಲ್ಲಿ ಈ ತ್ರಿಮೂ ರ್ತಿಗಳು ಸಾಧಿಸಿದ ಕಾರ್ಯವು ಅಪೂರ್ವವಾದುದು. ಕೌಜಲಗಿ ಹನುಮಂತ ರಾಯರು, ಕರ್ನಾಟಕದಲ್ಲಿ ಖಾದೀ ಕೇಂದ್ರಗಳನ್ನು ಸಂಘಟಿಸುವ ಕಾರ್ಯ ದಲ್ಲಿ ಮಗ್ನರಾಗಿ, ಹಳ್ಳಿ ಹಳ್ಳಿಗಳಲ್ಲಿ ನವಚೈತನ್ಯವನ್ನು ತುಂಬಿದರು. ಡಾ. ಹರ್ಡಿಕರರು, ಸೇವಾದಲದ ಮುಖಾಂತರವಾಗಿ ಕನ್ನಡ ನಾಡಿನ ತರುಣರನ್ನೆಲ್ಲ ಸಂಘಟಿಸಿ ತರುಣ ಕರ್ನಾಟಕಕ್ಕೆ ರೂಪಕೊಡಹತ್ತಿದರು. ದಿವಾಕರ ರಂಗ ರಾಯರು ರಾಜಕೀಯ ರಂಗವನ್ನು ಸಂಘಟಿಸಿ ಅಖಿಲ ಕರ್ನಾಟಕವು ಒಂದೇ ಆಡಳಿತೆಯಲ್ಲಿ ಬರುವಂತೆ ಮುಖಂಡರನ್ನು ಒಂದುಗೂಡಿಸಹತ್ತಿದರು. ಏಕೀ ಕರಣದ ಆಂದೋಲನವನ್ನು ಹೂಡಿ, ಕನ್ನಡಿಗರೆಲ್ಲರೂ ಒಂದುಗೂಡುವಂತೆ ಮಾಡಿ, ಪ್ರಾಂತದಲ್ಲಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿದರು. ಈ ತ್ರಿಮೂ ರ್ತಿಗಳ ಅವಿಶ್ರಾಂತ ಶ್ರಮದಿಂದ ಪ್ರಾಂತವು ಹುರಿಗೊಂಡು ಮೇಲಕ್ಕೆದ್ದಿತು. ಪ್ರಾಂತದಲ್ಲಿ ಹೊಸ ಶಕ್ತಿಯ ಸಂಚಾರವಾಯಿತು. ಕನ್ನಡ ತರುಣರು ಭಾರತದಲ್ಲೆಲ್ಲ ಹರಡಿ ಸೇವಾದಲದ ಮುಖಾಂತರ ಕನ್ನಡ ನಾಡಿನ ಕೀರ್ತಿಯನ್ನು ಬೆಳಿಸಹತ್ತಿದರು. ಪ್ರಾಂತವು ವಿವಿಧ ಮುಖದಿಂದ ಸಂಘಟಿಸಲ್ಪಟ್ಟದ್ದರಿಂದ ಕನ್ನಡಿಗರಲ್ಲಿ, 'ನಮ್ಮಲ್ಲಿಯೂ ಸಾಮರ್ಥ್ಯವಿದ್ದೆ

ನಾವೂ ಕಾರ್ಯಮಾಡಬಲ್ಲೆವು, ಎಂಬ ಸ್ವಾಭಿಮಾನವೂ ಆತ್ಮವಿಶ್ವಾಸವೂ ಉಂಟಾಗಿ, ಇಡೀ ಪ್ರಾಂತವು ತೇಜಸ್ವಿಯಾದ ಪುರುಷನಂತೆ, ಹೊಸವಿಚಾರ ಹೊಸ ಹುರುಪುಗಳಿಂದ ಭಾರತದ ರಾಜಕೀಯ ರಂಗದಲ್ಲಿ ಮಿನುಗಹತ್ತಿತು. ಈ ಎಲ್ಲ ಶ್ರೇಯಸ್ಸಿನ ಬಹುಭಾಗವು ಈ ತ್ರಿಮೂರ್ತಿಗಳಿಗೇ. ಆ ಕಾಲದಲ್ಲಿ ಇವರು ತಮ್ಮ ಸೇವೆಯಿಂದ ಕನ್ನಡಿಗರ ಹೃದಯದ ಗದ್ದುಗೆಗಳನ್ನೇರಿ, ಕರ್ನಾಟಕದ ಅನಭಿಷಿಕ್ತರಾಜರಾಗಿದ್ದರು. ಇವರೇ ನವಕರ್ನಾಟಕದ ನಿರ್ಮಾತೃಗಳು.

ಖಾದಿಯ ಕಾರ್ಯಕ್ಕಾಗಿ ಹಳ್ಳಿಯಲ್ಲಿ ಕಾಲಿಟ್ಟವರಿಗೆಲ್ಲ ಗ್ರಾಮೋದ್ಯೋಗಗಳ ಪುನರುಜ್ಜೀವನದ ಸ್ಫೂರ್ತಿಯಾಗುವದೆಂದು ಹನುಮಂತರಾಯರು ಹೇಳುತ್ತಿದ್ದರು. ಯಾರಾದರೂ ಈ ವಿಷಯವನ್ನು ಎತ್ತಿದರೆ ಸಾಕು. ತಮ್ಮ ಹಸಿವೆಯಿಂದ ಚಿಟೋರಿಯನ್ನು ತೆಗೆದು ಇಂತಿಂಥಲ್ಲಿ ಇಂಥ ಕೈಗಾರಿಕೆಯಿದೆ.

**ಗ್ರಾಮೋದ್ಯೋಗ**

ಈ ಭಾಗದಲ್ಲಿ ಇಂಥ ಉದ್ಯೋಗವನ್ನು ಪ್ರಾರಂಭಿಸಬಹುದು. ಇಷ್ಟು ಜನರು ಈ ಕೆಲಸಕ್ಕೆ ದೊರೆಯುವರು. ಇಂಥಲ್ಲಿಯ ಸಂಪತ್ತೆಲ್ಲವೂ ಹಾಳಾಗುತ್ತದೆ. ಅದರ ಉಪಯೋಗವು ರಾಷ್ಟ್ರಕ್ಕೆ ಹೇಗೆ ಆಗಬೇಕು! ಇತ್ಯಾದಿ ವಿಷಯಗಳನ್ನು ಅಂಕೆ ಸಂಖ್ಯೆಗಳನ್ನು ಕೊಟ್ಟು ವಿವರಿಸುತ್ತಿದ್ದರು. ಯಾವುದೇ ವಿಷಯವನ್ನು ಕೇಳಿದರೂ ಅದರ ಬಗೆಗೆ ರಾಯರ ಹಸಿವೆಯಲ್ಲಿ ಯೋಜನೆ ಸಿದ್ಧ, ವಿವಿಧ ಗ್ರಾಮೋದ್ಯೋಗಗಳ ವಿಷಯದಲ್ಲಿಯೂ ಮೂಲ ಇವರಿಗಿದ್ದ ಅಗಾಧವಾದ ಜ್ಞಾನವನ್ನು ಕಂಡು, ಅರ್ಥಶಾಸ್ತ್ರಜ್ಞರು ಕೂಡ ಅವಾಕ್ಕಾಗುತ್ತಿದ್ದರು. ಗ್ರಾಮೋದ್ಧಾರದ ವಿಷಯದಲ್ಲಿ ಸರಕಾರವು ಕೂಡ ಇವರ ಸಲಹೆಗಳನ್ನು ಕೇಳುತ್ತಿದ್ದಿತು. ಕಾಂಗ್ರೆಸ್ ಮಂತ್ರಿಮಂಡಲವು ಇವರನ್ನು ಗ್ರಾಮಸುಧಾರಣಾ ಮಂಡಳದ ಸದಸ್ಯರನ್ನಾಗಿ ಸ್ವೀಕರಿಸಿತ್ತು. ಅ. ಭಾ. ಗ್ರಾಮೋದ್ಯೋಗ ಸಂಘದ ಚಟುವಟಿಕೆಗಳನ್ನು ಕರ್ನಾಟಕದಲ್ಲಿ ಮೊದಲು ಪ್ರಾರಂಭಿಸಿದವರು ಇವರೇ! ಇವರ ಯೋಜನೆಯಂತೆಯೇ ಗದಗಿನಲ್ಲಿ ಕತ್ತದ ಕೈಗಾರಿಕೆಯು ಮತ್ತು ಬಿರಡಿಗಳನ್ನು ತಯಾರಿಸಲು ಕಲಿಸುವ, ಔದ್ಯೋಗಿಕ ಶಾಲೆಯು ಹೊನ್ನಾವರದಲ್ಲಿ ತೆರೆಯಲ್ಪಟ್ಟಿತು. ಹೊನ್ನಾವರದಲ್ಲಿ ಕೋಡಿನ ಕೈಗಾರಿಕೆ ಮತ್ತು ಜೇನು ಸಾಕುವ ವ್ಯವಸಾಯಗಳಿಗೆ ಜನ್ಮ ಕೊಟ್ಟವರೂ ಇವರೇ! ಅಲ್ಪ ಪ್ರಮಾಣ

ದಿಂದ ಪ್ರಾರಂಭವಾದ ಈ ಜೇನು ವ್ಯವಸಾಯದ ಹೊನ್ನಾವರವು ಇಂದು ಭಾರತದ ಪ್ರಮುಖ ಕೇಂದ್ರಗಳಲ್ಲಿ ಒಂದಾಗಿದೆ. ಈ ಜೇನುತುಪ್ಪದ ಸವಿಯನ್ನು ಸವಿಯುವಾಗ ಹನುಮಂತರಾಯರ ನೆನಸಾಗದೆ ಹೋಗುವದಿಲ್ಲ.

**ಸಮರಶೂರ ಸೇನಾಪತಿಗಳು**

ಹನುಮಂತರಾಯರು ಹೀಗೆ ವಿಧಾಯಕ ಕಾರ್ಯದಲ್ಲಿ ಮಗ್ನರಾಗುತ್ತಿದ್ದರೂ ರಾಷ್ಟ್ರದ ಸ್ವಾತಂತ್ರ್ಯದ ಹೋರಾಟಬಂದೊಡನೆ, ಅದರಲ್ಲಿ ಧುಮುಕುತ್ತಿದ್ದರು. ನಿಜವಾಗಿಯೂ ಇವರು ವೀರ ರಾಜಕಾರಣಿಗಳೇ! ಇಂತಹ ಸಮಯದಲ್ಲಿ ಇವರ ಜೀವ ನಿಲ್ಲುವದೆಂತು? ೧೯೩೦ರ ಸ್ವಾತಂತ್ರ್ಯ ಸಮರದಲ್ಲಿ ಅಂಕೋಲೆಯು ಉಪ್ಪಿನ ಸತ್ಯಾಗ್ರಹದ ರಣಕ್ಷೇತ್ರವಾಗಿದ್ದಿತು. ಶ್ರೀ ಹನುಮಂತರಾಯರು ಮುಖ್ಯ ಸಂಘಟಕರಾಗಿ, ಅಂಕೋಲೆಯಲ್ಲಿ ತಳ ಊರಿದರು. ಹಗಲು ರಾತ್ರಿಯನ್ನದೆ, ತಾಲೂಕಿನ ಹಳ್ಳಿಗಳಲೆಲ್ಲ ಸಂಚರಿಸಿ ತಮ್ಮ ವೀರವಾಣಿಯಿಂದ ಜನರಲ್ಲಿ ಉತ್ಸಾಹವನ್ನು ತುಂಬಿದರು. ಮತ್ತು ತಮ್ಮ ಕುಶಲ–ಸಂಘಟನೆಯಿಂದ ಜನತೆಯ ಉಕ್ಕೇರುವ ಉತ್ಸಾಹವು ವ್ಯವಸ್ಥಿತವಾಗಿ ಶಿಸ್ತಿನಿಂದ ತನ್ನ ಧ್ಯೇಯದತ್ತ ಹರಿಯುವಂತೆ ಮಾಡಿದರು. ಸ್ವಲ್ಪದರಲ್ಲಿ ಹೇಳಬೇಕಾದರೆ, ಕರ್ನಾಟಕದಲ್ಲಿ ಈ ಸತ್ಯಾಗ್ರಹವು ಯಶಸ್ವಿಯಾಗಿ ಕೊನೆಗಾಣಲು ಕೌಜುಲಗಿಯವರ ಕಾರ್ಯಕುಶಲತೆಯೇ ಬಹುಮಟ್ಟಿಗೆ ಕಾರಣವೆಂದು ಹೇಳಬಹುದು. ಈ ಹೋರಾಟದಲ್ಲಿ ರಾಯರು ಸೆರೆಮನೆಯನ್ನು ಕಾಣಬೇಕಾಯಿತು. ೩೨ರಲ್ಲಿಯು ಸರ್ಕಾರದ ಆತಿಥ್ಯವನ್ನೂ ಅವರು ಸ್ವೀಕರಿಸಿದರು. ಆದರೆ ಇವರು ಇದರಿಂದ ಸಂಧಿವಾತದಿಂದ ಬಳಲಬೇಕಾಯಿತು.

**ಹರಿಜನ ಕಾರ್ಯ**

ಮಹಾತ್ಮರ ಎಲ್ಲ ವಿಧಾಯಕ ಕಾರ್ಯಕ್ರಮಗಳಲ್ಲಿ ಸಂಪೂರ್ಣ ಶ್ರದ್ಧೆಯುಳ್ಳ ಗಾಂಧೀ ಶಿಷ್ಯರಲ್ಲಿ ಹನುಮಂತರಾಯರೊಬ್ಬರು. ಗಾಂಧೀಜಿಯವರು ಹರಿಜನ ಕಾರ್ಯವನ್ನು ೧೯೩೩–೩೪ರಲ್ಲಿ ಪ್ರಾರಂಭಿಸಿದೊಡನೆ ಹನುಮಂತರಾಯರು ಕಾಕಾ ಕಾರ್ಖಾನಿಸರಿಂದ ಕಾರ್ಯವನ್ನು ಸುರುವು ಮಾಡಿಸಿದರು. ಅದಕ್ಕೆ ಬೆಂಬಲವಾಗಿ ನಿಂತರು. ವಿಜಾಪುರದಲ್ಲಿ ಹರಿಜನ ವಿದ್ಯಾರ್ಥಿ ನಿಲಯವೂ ಹರಿಜನಮಂದಿರವೂ ಹನುಮಂತರಾಯರ ಕೀರ್ತಿಯನ್ನು ಹೊಗಳು

ತ್ತಿವೆ. ರಾಯರ ಜೋಳಿಗೆಯಲ್ಲಿ ಕರ್ನಾಟಕದಲ್ಲಿ ದೇವದಾಸಿ ಪದ್ಧತಿಯಿಂದ ಎಷ್ಟು ಜನ ಹಾಳಾಗಿದ್ದಾರೆ? ಮುಂಬಯಿ ಪಟ್ಟಣದಲ್ಲಿಯ ಸೂಳಿಗೇರಿಯಲ್ಲಿ ಕರ್ನಾಟಕದ ಹೊಲತಿಯರೆಷ್ಟು? ಅಧರ್ಮ, ಭ್ರಷ್ಟಾಚಾರವೆಂದು ಕೂಗುವ ಮಹಾಧಾರ್ಮಿಕರು ಎಷ್ಟೋ ಜನ ಯಾವ ಯಾವ ಊರಲ್ಲಿ ರಾತ್ರಿ ಹರಿಜನ ಕೇರಿಯಲ್ಲಿರುತ್ತಾರೆ? ಇತ್ಯಾದಿ ಅಂಕೆ ಸಂಖ್ಯೆಗಳಿದ್ದವು. ಈ ಸಮಾಜವು ಉದ್ಧಾರವಾಗಿ ನಾಗರಿಕರೆಂದಾಗುವರೋ ಎಂದು ಹಗಲಿರುಳು ಚಿಂತಿಸುತ್ತಿದ್ದರು. ಭಾರತವು ಸರ್ವಾಂಗ ಸುಂದರವಾಗಬೇಕಾದರೆ ಹರಿಜನೋದ್ಧಾರ ವಿಲ್ಲದೆ ಸಾಧ್ಯವೇ ಇಲ್ಲವೆಂದು ಇವರ ಮತ.

ವಿಧಾಯಕ ಕಾರ್ಯದಲ್ಲಿ ರಾಷ್ಟ್ರಸಂವರ್ಧನೆಯ ಶಕ್ತಿಯಿದೆ ಎಂದು ಹನುಮಂತರಾಯರಿಗೆ ಮನವರಿಕೆಯಾಗಿದ್ದರೂ ಈ ಕಾರ್ಯಕ್ಕೆ ಅಧಿಕಾರದ ಅವಶ್ಯಕತೆಯಿದೆ ಎಂದು ಅವರಿಗೆ ಅನಿಸಿತು. ಅಸೆಂಬ್ಲಿಯ ಚುನಾವಣಿಗೆ ನಿಂತರು. ಅವರ ಹಿರಿಯಾಳುತನದಿಂದ ಗಾಂಧೀ ಗುಂಪಿನಲ್ಲಿ ಸ್ವಲ್ಪ ಅಲ್ಲೋಲ ಕಲ್ಲೋಲವಾಯಿತು. ಇದರಿಂದ ವಿಧಾಯಕ ಕಾರ್ಯದಲ್ಲಿ ವಿಶ್ವಾಸವಿದ್ದವರಿಗೂ ಪಾರ್ಲಮೆಂಟರಿ ಕೆಲಸದ ಅವಶ್ಯಕತೆಯಿದೆ ಎಂದು ವ್ಯಕ್ತವಾಯಿತು. ಹುದಲಿಯಲ್ಲಿ ಕೂಡಿದ ಗಾಂಧೀ ಸೇವಾ ಸಂಘವು ರಾಯರ ವಿಚಾರ ಸರಣಿಯನ್ನೇ ಎತ್ತಿ ಹಿಡಿದು ಸಂಘದ ಸದಸ್ಯರು ಮಂತ್ರಿಪದಗಳನ್ನು ಸ್ವೀಕರಿಸಲು ನಿರ್ಬಂಧವಿರಕೂಡದೆಂದು ನಿಶ್ಚಯಿಸಿತು.

**ಚುನಾವಣಿ**

ಆದರೆ ಹನುಮಂತರಾಯರು ಯಶಸ್ವಿಗಳಾಗಲಿಲ್ಲ. ಜನತೆಯ ಸಲುವಾಗಿ ಹಗಲಿರುಳು ದುಡಿದ, ತನ್ನ ಆಯುಷ್ಯವನ್ನೇ ಸೇವೆಯಲ್ಲಿ ಸವಿಸಿದ ಹನುಮಂತರಾಯರು ಬಿದ್ದುದು ಅನೇಕರಿಗೆ ಆಶ್ಚರ್ಯವಾಯಿತು. ಅವರ ಅಪಯಶಸ್ಸಿನಿಂದ, ಹಾಗು ಅವರ ವಿರುದ್ಧವಾಗಿ ನಡೆದ ಅಪಪ್ರಚಾರದಿಂದ ಅವರ ಮನಸ್ಸಿಗೆ ಬಹಳ ನೋವುಂಟಾಯಿತು. ನಿಜವಾಗಿಯೂ ಬಹುಸಂಖ್ಯಾಕರಾದ ಎಲ್ಲ ಜಾತಿಗಳ ಸೇವೆಗಾಗಿಯೇ ದುಡಿದ ಮನುಷ್ಯನ ಮೇಲೆ ಅಸಹ್ಯ ಹಾಗು ಖೊಟ್ಟಿ ಜಾತೀಯತೆಯ ಆರೋಪಗಳನ್ನು ಮಾಡಿದ್ದರಿಂದ ಅವರಿಗೆ ಅತ್ಯಂತ ದುಃಖವಾಯಿತೆಂಬುದನ್ನು ಕರ್ನಾಟಕವೇ ಬಲ್ಲದು ನಮ್ಮ ಪ್ರಾಂತ

ದಲ್ಲಿ ಹಬ್ಬಿದ ದುಷ್ಟಜಾತೀಯತೆಯೋ ರಾಯರ ಅಪಯಶಸ್ಸಿಗೆ ಕಾರಣವಾಯಿತು. ಈ ದುರಾಭಿಮಾನವು ದೂರಾಗುವವರೆಗೆ ಕನ್ನಡಿಗರಿಗೆ ಮುಕ್ತಿಯಿಲ್ಲ. ಈ ಸೋಲಿನ ಪರಿಣಾಮವು ಅವರನ್ನು ಅರಾಯುಷಿಯನ್ನಾಗಿ ಮಾಡಿತು. ನಿಜವಾಗಿಯೂ ಹನುಮಂತರಾಯರು ಆರಿಸಿಬಂದು ಮಂತ್ರಿಗಳಾಗಿದ್ದರೆ, ಕರ್ನಾಟಕದ ಬಣ್ಣವೇ ಬದಲಾಗುತ್ತಿದೆಯೆಂಬದರಲ್ಲಿ ಸಂದೇಹವಿಲ್ಲ. ಹನುಮಂತರಾಯರು ಈ ಪೆಟ್ಟನ್ನು ಶಾಂತ ರೀತಿಯಿಂದ ಸಹಿಸಿ, ಜನಸೇವೆಯ ಕಾರ್ಯವನ್ನು ಭರದಿಂದ ಸಾಗಿಸಹತ್ತಿದರು. ಇದೇ ಅವರ ಲೋಕೋತ್ತರತೆ!

**ಬರಗಾಲ ನಿವಾರಣೆ**

ಈ ಎಲ್ಲ ಕಾರ್ಯಗಳಿಗಿಂತಲೂ ಹನುಮಂತರಾಯರು ವಿಜಾಪೂರ ಜಿಲ್ಲೆಯ ೩೮-೪೩ ರ ಬರಗಾಲಗಳಲ್ಲಿ ಮಾಡಿದ ಜನಸೇವೆಯು ಅತ್ಯದ್ಭುತವಾದುದು. ಈ ಕಾಲದಲ್ಲಿ ಅವರು ತೋರಿಸಿದ ಸಂಘಟನಾ ಸಾಮರ್ಥ್ಯ ಕಾರ್ಯ ಕೌಶಲ್ಯಗಳು ಅವರ್ಣನೀಯವಾದವು. ಶ್ರೀ. ಎ. ವ್ಹಿ. ಥಕ್ಕರ ಬಾಪಾ, ವೈಕುಂಠಲಾಲಾ ಮೆಥಾ, ಶಾಂತಿದಾಸ ಅಸ್ಕರರಂಥ ಮಹನೀಯರ ಮನಸ್ಸನ್ನು ಈ ಕಾರ್ಯದತ್ತ ಎಳೆದರು. ಮುಂಬಯಿಯಂಥ ಪಟ್ಟಣವು ೧೦ ಲಕ್ಷ ರೂಪಾಯಿಗಳನ್ನು ಈ ಕಾರ್ಯಕ್ಕೆ ವೆಚ್ಚ ಮಾಡುವಂತೆ ಮಾಡಿದರು ಬರಗಾಲದ ನಿವಾರಣೆಗಾಗಿ, ಅಲ್ಲಲ್ಲಿ ಊಟದ ಮನೆಗಳನ್ನು ಪ್ರಾರಂಭಿಸಿದರು. ದನಗಳಿಗಾಗಿ ಮೇವನ್ನು ಹಂಚಿದರು. ಒಕ್ಕಲತನಕ್ಕಾಗಿ, ಸಾಲತಗಾಯಿಗಳನ್ನು ಕೊಡಿಸಿದರು, ಸಾಮಾನುಗಳನ್ನು ಸೋವಿ ದರದಲ್ಲಿ ಸಿಗುವಂತೆ ಮಾಡಿದರು ನೂಲುವ ಕೇಂದ್ರಗಳನ್ನು ಸಂಘಟಿಸಿ, ಉದ್ಯೋಗವನ್ನು ಕಲ್ಪಿಸಿದರು ರಸ್ತೆ ಕೆರೆಭಾವಿಗಳನ್ನು ತೋಡಹಚ್ಚಿ ಕೆಲಸ ದೊರೆಯುವಂತೆ ಮಾಡಿದರು. ಬರಗಾಲಕ್ಕೆ ಈಡಾಗಿ, ಮರಣದ ದಾರಿಯಲ್ಲಿದ್ದ ಲಕ್ಷಾವಧಿ ಜನರ ಪ್ರಾಣಗಳನ್ನುಳಿಸಿದರು. ಹನುಮಂತರಾಯರೇ ಈ ಎಲ್ಲ ಕಾರ್ಯಗಳ ಜೀವಾಳ. ಬೇನೆಯಿಂದ ಬಳಲುತ್ತಿದ್ದರೂ ಅವರು ಆ ಕಡೆಗೆ ಲಕ್ಷ್ಯವನ್ನೀಯದೆ ಅವಿಶ್ರಾಂತ ಶ್ರಮವನ್ನು ಮಾಡಿದರು. ಠಕ್ಕರ ಬಾಪಾರವರು ವಿಶ್ರಾಂತಿ ತೆಗೆದುಕೊಳ್ಳಲು ಬಿನ್ನವಿಸಿದಾಗ ಜನಮರಣದ ಮಡುವಿನಲ್ಲಿದ್ದಾಗ ಅವನ್ನು ನೋಡಿಯೂ ಸುಮ್ಮನೇ ಕೂಡ್ರುವದಕ್ಕಿಂತ ಆತ್ಮಹತ್ಯೆಯೇ ಲೇಸು ಎಂದು ಉತ್ತರಿಸಿದರು. ಈ ಕಾರ್ಯವನ್ನು ನೋಡಲಿಕ್ಕೆ ಬಂದ ಬಾಬಾ ರಾಘವದಾಸ

ರೆಂಬುವವರು "ಈ ಮಾದರಿಯ ಕಾರ್ಯವನ್ನು ನಾನು ಎಲ್ಲಿಯೂ ನೋಡಿಲ್ಲ. ಕೇಳಿಯೂ ಇಲ್ಲ. ಹನುಮಂತರಾಯರಿರದಿದ್ದರೆ ವಿಜಾಪೂರವು ಎರಡನೆಯ ಬಂಗಾಲವಾಗುತ್ತಿತ್ತೆಂದು ಉದ್ಗಾರ ತೆಗೆದರು." ರಾಯರನ್ನೂ ಅವರ ಸಹೋದ್ಯೋಗಿಗಳನ್ನು ಅಭಿನಂದಿಸಿದರು. ಲಕ್ಷಾವಧಿ ಪ್ರಾಣಗಳಿಗೆ ಜೀವದಾನ ಮಾಡಿದ ಪುಣ್ಯವು ನಿಮಗೆಂದರು. ರಾಯರು ಕೈಕೊಂಡ ದೇಶ ಸೇವೆಯ ಪರಿಪೂರ್ಣ ಫಲವಿದು. ಧನ್ಯ ಹನುಮಂತರಾಯರೇ; ನೀವೇ ಧನ್ಯ !!

ಹನುಮಂತರಾಯರು ಪ್ರತಿಭಾಸಂತಕವಿಗಳೂ ಕಥಾಲೇಖಕರೂ, ಶ್ರೇಷ್ಠ ವಿಮರ್ಶಕರೂ, ವ್ಯಂಗ ಲೇಖಕರೂ, ಉತ್ತಮ ಹಾಸ್ಯಗಾರರೂ ಆಗಿದ್ದರು.

**ಸಾಹಿತಿಗಳು**

ಅವರಿಗೆ ಕನ್ನಡ ಮರಾಠಿ, ಇಂಗ್ಲೀಷ ಭಾಷೆಗಳ ಮೇಲೆ ಪ್ರಭುತ್ವವಿದ್ದಿತು. ಇವರು ಸಾಹಿತ್ಯಕ್ಕಾಗಿ ಸಾಹಿತ್ಯವನ್ನು ನಿರ್ಮಿಸಿದವರಲ್ಲ ವಿಶೇಷವಾಗಿ ಇವರು ವಿನೋದಿ ಲೇಖಕರೆಂದು ತಿಳಿಯುವವರು ಇವರ ಅಂತಃಕರಣವನ್ನೇ ಅರಿತಿಲ್ಲವೆಂದು ಹೇಳಬಹುದು. ಹನುಮಂತರಾಯರಂಥ ಉಗ್ರತಪಸ್ವಿಗಳಲ್ಲಿ ಕೇವಲ ಮನೋರಂಜಕ ವಿನೋದ ವಿರುವದು ಸಾಧ್ಯವೇ ?ಅವರು ವಿವಿಧ ಕ್ಷೇತ್ರದಲ್ಲಿ ಕಾರ್ಯಮಾಡುವಾಗ ಅವರು ಹಲವು ಮಾತುಗಳನ್ನು ಬರೆಯಬೇಕಾಗುತ್ತಿತ್ತು. ಅವರ ಹೃದಯದಲ್ಲಿ ನಟ್ಟ, ಹಳ್ಳಿಯ ದೃಶ್ಯಗಳನ್ನೂ ಅವರ ಉದ್ಧಾರದ ಮಾರ್ಗಗಳನ್ನೂ ಬರೆದು ಪ್ರಕಟಿಸುತ್ತಿದ್ದರು. ಅವರ ಜೀವನವೇ ರಸಜೀವನ. ಆದುದರಿಂದ ಬರೆದುದೆಲ್ಲ ಸಾಹಿತ್ಯವಾಗಿ ಪರಿಣಮಿಸಿತು. ಅವರ ಬರೆಹಗಳಲ್ಲೆಲ್ಲ ಅದ್ಭುತವಾದ ಪ್ರತಿಭೆಯು ಹೊರಹೊಮ್ಮಿ ಕೆಲವೊಂದು ಪ್ರಸಂಗಗಳಲ್ಲಿ ಓದುಗರನ್ನು ನಗೆಗಡಲಲ್ಲಿತೆಲಿಸುವಂತೆ, ಪ್ರಭಾವ ಬೀರುತ್ತಿತ್ತು. **"ಭೋಜನ ಸುಖರತ ಜನಕಾಡು, ನನ್ನದು ಈ ಕನ್ನಡ ನಾಡು"** ಎಂಬ ಅವರ ವ್ಯಂಗ್ಯೋಕ್ತಿಯ ಖಂಡಕಾವ್ಯವು ನಾರೀ ಎಂಬ ಹೊಸ ಕನ್ನಡ ರಸಿಕರನ್ನು ಕೂಡ ತಲೆದೂಗಿಸದೆ ಇರಲಿಲ್ಲ. ಈ ಗ್ರಂಥದಲ್ಲಿ ಸಂಗ್ರಹಿಸಿದಪ್ರತಿಯೊಂದು ಬರೆಹವೂ ಈ ಮಾತಿಗೆ ಸಾಕ್ಷಿಯಾಗಿವೆ.

ಇವರ ಅಂತಃಕರಣದಲ್ಲಿ ಕನ್ನಡನಾಡಿನ ಬಗೆಗೆ ಆಳವಾದ ಅಭಿಮಾನವಿದ್ದಿತು. ಎರಡನೆಯವರು ಕನ್ನಡನಾಡನ್ನು ಹಳಿದರೆ ಎಂದೂ ಅದನ್ನು

ಸಹಿಸುತ್ತಿದ್ದಿಲ್ಲ. ಕನ್ನಡಿಗರ ಪ್ರಾಂತೀಕರಣದ ಬೇಡಿಕೆಯು ಎಷ್ಟು ನ್ಯಾಯವಾದದೂ ಅವಶ್ಯವಾದದೂ ಎಂಬ ಸಂಗತಿಯನ್ನು ಪರಪ್ರಾಂತೀಯರಿಗೆ ಮನಗಾಣಿಸಲು ಪ್ರಯತ್ನಿಸುತ್ತಿದ್ದವರು ಹನುಮಂತರಾಯರೇ ! ಬೆಳಗಾವಿಯಲ್ಲಿ ೧೯೨೯ ರಲ್ಲಿ ನಡೆದ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಲನದ ಕಾಲಕ್ಕೆ ಕನ್ನಡಿಗರು ಮಾಡಿದ ವಿರೋಧವು ಅಯೋಗ್ಯವಲ್ಲೆಂದು ಅಧಿಕಾರವಾಣಿಯಿಂದ ಹಾಗು ಬರಹಗಳಿಂದ ನಮ್ಮ ಹಾಸು ಪರಕೀಯ ಜನಾಂಗೆ ಮನಗಾಣಿಸಿಕೊಟ್ಟ ಶ್ರೇಯವು ಹನುಮಂತರಾಯರಿಗೇ ! ರಾಷ್ಟ್ರೀಯತೆಗೆ ಪೋಷಕವಾಗುವಂತಹ ಪ್ರಾಂತಾಭಿಮಾನವು ಅವಶ್ಯವೆಂದು ಅವರ ಅಭಿಪ್ರಾಯವಿದ್ದಿತು. ಅವರು ಅತ್ಯಂತ ಸಾತ್ವಿಕವಾದ ಕನ್ನಡದ ಹಾಗು ಕರ್ನಾಟಕದ ಅಭಿಮಾನವನ್ನು ತಾಳಿ, ಅವುಗಳ ಪರಿಪೋಷಣೆಯ, ಮಹತ್ಕಾರ್ಯವನ್ನು ಆಮರಣಾಂತವಾಗಿ ಮಾಡಿದರು.

**ಕರ್ನಾಟಕ ಭಕ್ತ**

ಅವರ ಅಂತಃಕರಣವು ಬಡವರ ಸೇವೆಗಾಗಿ ಯಾವಾಗಲು ಧಾವಿಸುತ್ತಿದ್ದಿತು. ಬಡವಿದ್ಯಾರ್ಥಿಗಳು, ಸಹೋದ್ಯೋಗಿಗಳು ಮಿತ್ರರು ಕಷ್ಟದಲ್ಲಿದ್ದರೆ, ಅವರು ತಳಮಳಗೊಳ್ಳುತ್ತಿದ್ದರು. ತಾವು ಕಷ್ಟದಲ್ಲಿದ್ದರೂ ಅವರಿಗೆ ನೆರವನ್ನು ನೀಡುತ್ತಿದ್ದರು. ಸ್ನೇಹಿತರಿಂದ ನೆರವನ್ನು ಕೊಡಿಸುತ್ತಿದ್ದರು. ಇವರು ಸಿರಿ ಇಲ್ಲದ ಸಿರಿವಂತರು. ಮಿತ್ರರ ಧನವನ್ನು ತಮ್ಮ ಧನದಂತೆ ಉಪಯೋಗಿಸುವ ಪ್ರೇಮದ ಅಧಿಕಾರವನ್ನು ಸಂಪಾದಿಸಿದ್ದರು. ನನಗೆ ಗೊತ್ತಿದ್ದಮಟ್ಟಿಗೆ, ಕರ್ನಾಟಕದ ಅನೇಕ ಕೆಲಸಗಾರರು ಅವರಿಂದ ಉಪಕೃತರಾಗಿದ್ದಾರೆ. ರಾಯರು ಎಷ್ಟೋ ಕುಟುಂಬಗಳಿಗೆ, ಸಹಾಯ ನೀಡಿದ್ದಾರೆ. ಸೇವೆ ಮಾಡಿದ್ದಾರೆ. ಪ್ರಸಂಗದಲ್ಲಿ ಪ್ರಾಣ ಉಳಿಸಿದ್ದಾರೆ. ಆದುದರಿಂದಲೇ ಕನ್ನಡ ಜನಾಂಗವು ಅವರನ್ನು **ಬಡವರ ಬಂಧು** ಎಂದು ಸಂಬೋಧಿಸುತ್ತಿದ್ದಿತು.

**ಬಡವರ ಬಂಧು**

ಅಪ್ರತಿಮ ಸಾಹಸಿಗಳೂ ತ್ಯಾಗಮೂರ್ತಿಗಳೂ, ರಾಷ್ಟ್ರ ಸೇವಕರೂ ಸದ್ಗುಣಿಗಳೂ ಆಗಿದ್ದರೂ, ಇವರ ಯೋಗ್ಯತೆ ಹಾಗು ಸಾತ್ವಿಕತೆಯು ಅಸಾಧಾ

ರಣವಾಗಿದ್ದರೂ, ರಾಯರು ಮುಂದೇಕೆ ಬರಲಿಲ್ಲ! ಎಂಬ ಪ್ರಶ್ನೆಯು ಅನೇಕ ಕನ್ನಡಿಗರ ತಲೆತಿನ್ನುತ್ತಿದೆ. ಕನ್ನಡಿಗರು ಅವರ

**ರಾಯರು ಹಿಂದುಳಿದದು ಏಕೆ**

ಶಕ್ತಿ ಸಾಮರ್ಥ್ಯಗಳನ್ನರಿತು ಅವರಿಗೆ ಕೊಡಬೇಕಾದ ಮನ್ನಣೆಯನ್ನು ಕೊಡಲಿಲ್ಲ. ಈ ಮಹನೀಯರು ಎಂದೂ ಮನ್ನಣೆಯನ್ನಪೇಕ್ಷಿಸಲಿಲ್ಲ. ಈ ಮಹನೀಯರ ವಿಷಯವಾಗಿ, ಕನ್ನಡ ಜನಾಂಗದಲ್ಲಿಯೂ ಹಾಗು ಭಾರತದಲ್ಲಿಯೂ ನಮ್ಮವರೇ ಆದ ಕೆಲವರು ತಪ್ಪುತಿಳುವಳಿಕೆಯನ್ನು ಹುಟ್ಟಿಸಿದ್ದು ನಾ ಬಲ್ಲೆ. ಅವರಿಗೆ ಸಿಗಬೇಕಾದ ಮನ್ನಣೆಯು ದೊರೆತಿದ್ದರೆ, ಅವರು ನಿಶ್ಚಯವಾಗಿಯೂ ಅಖಿಲ ಭಾರತೀಯ ಪ್ರಥಮ ಶ್ರೇಣಿಯ ಮುಖಂಡರಲ್ಲಿ ಒಬ್ಬರಾಗುತ್ತಿದ್ದರೆಂಬುದರಲ್ಲಿ ಸಂದೇಹವೇ ಇಲ್ಲ. ಅವರಲ್ಲಿ ಅಂತಹ ಅಲೌಕಿಕವಾದ ಗುಣಗಳಿದ್ದವು. ಅದರಿಂದ ನಮ್ಮ ಪ್ರಾಂತಕ್ಕೂ ಭಾರತಕ್ಕೂ ಅವರ ಬುದ್ಧಿಮತ್ತೆಯ, ಕಾರ್ಯಕುಶಲತೆಯ ಲಾಭವು ದೊರೆಯುತ್ತಿದ್ದಿತು.

ಹೀಗೆ ಅವರ ಗುಣಗಳನ್ನು ನೆನೆಯುತ್ತಹೋದಂತೆ, ಇನ್ನೂ ಬರೆಯಬೇಕೆಂಬ ಆಶೆ ಬಲಿಯುತ್ತ ಹೋಗುತ್ತದೆ. ಅವರ ಸಂಪೂರ್ಣವಾದ ಚರಿತ್ರೆಯು ಪ್ರಸಿದ್ಧವಾಗುವದು ಕನ್ನಡ ಜನಾಂಗದ ಹಿತದ ದೃಷ್ಟಿಯಿಂದ ಅತ್ಯವಶ್ಯ. ಮುಂದಿನ ಲೇಖಕರಿಗೆ ಅದು ಮೀಸಲಾಗಿರಲಿ. ಈ ಚಿಕ್ಕ ಚರಿತ್ರೆಯನ್ನು ಇಲ್ಲಿಗೆ ಮುಗಿಸುವೆ.

ಶ್ರೀ ಕಾಕಾ ಕಾರ್ಖಾನೀಸರ ನೇತೃತ್ವದಲ್ಲಿ ಉತ್ಕೃಷ್ಟ ರೀತಿಯಿಂದ ಸಾಗಿದ ಹರಿಜನ ವಸತಿ ಗೃಹ, ಕನ್ಯಾಮಂದಿರಗಳೂ, ಹೊನ್ನಾವರದ ಗ್ರಾಮೋದ್ಯೋಗ ಕೇಂದ್ರವೂ, ಬಾಗಿಲಕೋಟೆಯ ಗೋಶಾಲೆಯೂ, ಕರ್ನಾಟಕದಲ್ಲಿಯ ಖಾದೀ ಕಾರ್ಯವೂ ಬರಗಾಲ ನಿವಾರಣೋಪಾಯದ ಅದ್ಭುತ ಕಾರ್ಯವೂ ರಾಯರ ಧವಲ ಕೀರ್ತಿಯನ್ನು ಜಗತ್ತಿಗೆ ಕೈಯೆತ್ತಿ ಸಾರುತ್ತಲಿವೆ. ಅವರ ಕೀರ್ತಿಯನ್ನು **ಕೃಷ್ಣಮೂರ್ತಿ ಪುರಾಣಿಕರು** ಕೆಳಗಿನಂತೆ ಹಾಡಿದ್ದಾರೆ.

# ಪುಣ್ಯ ಸ್ಮರಣೆ

(ದಿವಂಗತ ಕೌಜಲಗಿ ಹಣಮಂತರಾಯರನ್ನು ನೆನೆದು)

ಹೃದಯ ಗಂಗೆಯ ನೊರೆಯ ನೂಲಿನಲಿ ನೇದಂತೆ
ಜೀವನದ ಧವಲತೆಯೆ ಮೈವೆತ್ತು ಬಂದಂತೆ
ನಿಡುದೇಹಕಿಡಿದಾಗಿ ನಿಡಿದಾದ ನಿಲುವಂಗಿ;
ನಿತ್ಯ ಜೀವನದಲ್ಲಿ ಸತ್ಯಸಾಧನೆಗೆಯ್ವ
ಸಾತ್ವಿಕದ ಮುಖಮುದ್ರೆ, ಸರಳತೆಗೆ ಸರಳತೆಯ
ಪಾಠಕಲಿಸುವ ರೀತಿ. ಬಾಳ ಹಂದರದಲ್ಲಿ
ಕಟು ಮಧುರ-ಸಂಗೀತ ಸಾಹಿತ್ಯ ಕೇಳಿಯಲಿ.
ನಗೆಯ ಹೊಗೆ ತೇಲಿಸುತ ಬಗೆಯ ತಿದ್ದುವ ಠೀವಿ.
ಜೀವನದ ಕಲಹದಲಿ

ಬಾಳು ಬೇಗುದಿಗೊಂಡು ನೋವು ಸಾವುಗಳಲ್ಲಿ
ತಾಯ್ನಾಡು ಕುದಿಯುತಿರೆ ಧೀರನಾಯಕನಂತೆ
ಗಂಭೀರವಾಣಿಯಲಿ ವರದ ಹಸ್ತವನಿತ್ತ
ನಿನ್ನ, ಕನ್ನಡನಾಡು ಮರೆಯದೆಂದೆಂದಿಗೂ.
ಸತ್ತನೆಂಬರೆ ನಿನ್ನ ! ಸತ್ತನೆಂಬುವ ಮಾತೆ
ಸತ್ತು ನಿಲ್ಲುವದಯ್ಯ. ಮಡಿದರೂ ಮಡಿಯದಿಹ
ಅಮರ ಜೀವಿಯು ನೀನು. ಮರಣವಮರರಿಗೆಲ್ಲಿ ?

**ಜಯಹಿಂದ**

**ಬುರ್ಲಿ ಬಿಂದುಮಾಧವ**

# ರಾಯರ ಆಯುಷ್ಯದಲ್ಲಿಯ ಮುಖ್ಯ ಸಂಗತಿಗಳು

★

| | |
|---|---|
| ೧೮೯೨ ರಲ್ಲಿ | ಜನನ. |
| ೧೯೧೬ ,, | ವಕೀಲಿ ಪ್ರಾರಂಭ |
| ೧೯೨೧ | ವಕೀಲಿ ಬಿಟ್ಟದ್ದು |
| ,, | ಶರೆಮನೆ |
| ೧೯೨೩ | ಬಿಡುಗಡೆ |
| ೧೯೨೪ ರಲ್ಲಿ | ಹೆಂಡತಿಯ ಮರಣ |
| ,, ,, | ಅ. ಭಾ. ಗ್ರಾಮೋದ್ಯೋಗ ಪ್ರದರ್ಶನ |
| | ಗಾಂಧೀ ಸೇವಾ ಸಂಘದ ಸದಸ್ಯತ್ವ |
| ೧೯೨೫ | ಖಾದೀ ಕಾರ್ಯ ಕೈಕೊಂಡುದು |
| ೧೯೨೮ | ಕರ್ನಾಟಕ ಚರಖಾ ಸಂಘದ ಸ್ಥಾಪನೆ |
| ೧೯೩೦–೩೧ | ಉಪ್ಪಿನ ಸತ್ಯಾಗ್ರಹ |
| ೩೧–೩೨ | ಜೇಲು |
| ೩೨ | ಸಂಧಿವಾತದಿಂದ ಬಳಲುವಿಕೆ |
| ೧೯೩೩–೪ | ಜಿ ಕಾ. ಅಧ್ಯಕ್ಷರು, ಹರಿಜನ ಕಾರ್ಯ |
| ೧೯೩೬ | ಚುನಾವಣಿಗೆ ನಿಂತುದು ಬರಗಾಲದ ಕಾರ್ಯ |
| ೧೯೩೮ | ರಾಮದುರ್ಗದ ದುರಂತ |
| ೧೯೪೦ | ಗ್ರಾಮೋದ್ಯೋಗ ಹೊನ್ನಾವರದಲ್ಲಿ |
| | ಜೇನಿನ ವ್ಯವಸಾಯದ ಪ್ರಾರಂಭ |
| ೧೯೪೧ | ಚರಖಾ ಸಂಘಕ್ಕೆ ರಾಜೀನಾಮೆ |
| ೧೯೪೨ | ವಿಶ್ರಾಂತಿಗಾಗಿ ಹುಕ್ಕೇರಿ ರೋಡಿನಲ್ಲಿ |
| | ಮಂತ್ರಾಲಯದಲ್ಲಿ ಸೇವಾಕಾರ್ಯ |
| ೪೩–೪೪ | ವಿಜಾಪುರದ ಬರಗಾಲದ ಕೆಲಸ |
| ೧೯೪೫ | ಮರಣ |

## ನಾಂದೀಪದ್ಯ

# ಕನ್ನಡ ನಾಡು!

( ಕವಿ ಕುಲಕರ್ಣಿಯವರಿಂದ )

ಭೋಜನ ಸುಖರತ ಜನ ಕಾಡು ! ನನ್ನದು ಈ ಕನ್ನಡ ನಾಡು !
ಮಂಗಳೂರಿನ ಮತ್ಸ್ಯಾಹಾರಾ । ಕೊಡಗಿನ ಕಟು ಕಾಫೀ ನೀರಾ ।
ಮೈಸೂರಿನ ಇಡ್ಡಲಿ ದೋಸಿ । ಬಳ್ಳಾರಿಯ ಅನ್ನದ ರಾಶಿ ।
ಧಾರವಾಡದಲ್ಲಿ ಅವಲಕ್ಕಿ । ಕಾರವಾರದ ತಾಳಿಯು ಚಕ್ಕಿ ।
ಬೆಳಗಾಂವಿಯಲ್ಲಿ ಬುರಬೂರಿ । ಕಲಬುರ್ಗಿಯಲ್ಲಿ ಕಂದೂರಿ ।
ವಿಜಾಪೂರದ ಒಣ ಒಣ ರೊಟ್ಟಿ । ನೆನಪಾದರೆ ಉರಿತದ ಹೊಟ್ಟಿ ।
ಅಂಬೋಡಿ ಉಪ್ಪಿಟ್ಟಿನ ದೇಶಾ ।
ನಾನಾವಿಧ ತಿಂಡಿಯ ಕೋಶಾ ।
ಕನ್ನಡಿಗನ ಮೋಹದ ಪಾಶಾ ।
ಹೆರತುಪ್ಪಾ ಕಡುಬಿನ ಬೀಡು । ನನ್ನದು ಈ ಕನ್ನಡ ನಾಡು !

## ಭಾಗ ೧

# ನಾಟ್ಯಛಟಗಳು

ಈ ನಾಟ್ಯಛಟಗಳಲ್ಲಿ ಮಾನವಸ್ವಭಾವದ ವಿವಿಧ ಚಿತ್ರಗಳನ್ನು ಸುಂದರವಾಗಿ ವರ್ಣಿಸಿದೆ.

' ನಾಟ್ಯಛಟ '

*

# ಕಾಶೀಬಾಯಿಯವರ ಯಾತ್ರಾಪ್ರಯಾಣ

ಕಾಶೀಬಾಯಿ—" ಟಾಂಗಾ ಬಂತು ! ಎಂಥಾ ಲಗೂನ ಗಾಡೀ ಹೊತ್ತಾ ತಿದೂ. ಮುಂಜಾನಿಂದ ಗಡಿಬಿಡಿ ಗಡಿಬಿಡಿ ಮಾಡಿದರೂ ಇನ್ನೂ ಕೆಲಸ ಮುಗಿದಿಲ್ಲ ಇಲ್ಲ. ಆಯ್ತು. ಕೈಕಾಲ ಘಟ್ಟಿ ಇರೂದ್ರೊಳಗs ಉಡುಪಿ ಕೃಷ್ಣನ್ನs ನೋಡೆರ ಬರೂಣ. ಗಂಟ ಕಟ್ಟಿದ್ದs ಅದ. ವೈದು ಟಾಂಗಾದಾಗ ಇಡಪಾ. ನೀ ಬ್ಯಾಡ ಮಲ್ಯಾ. ಈಗs ವೈಲಿಗಿ ಮಾಡಬ್ಯಾಡ, ಗೋವಿಂದಾ ನೀ ಒಯ್ದು ಇಡ ಬಾಳಾ. ಹಿಂದಿನ ಮಗ್ಗಲ ಇಡು. ಟಾಂಗಾದ ಇಮಾಮುಗ ಮುಟ್ಟಿಸ ಬ್ಯಾಡ.

ಹೋಗಿಬರ್‍ತ್ತನಾ ಗಂಗಾಬಾಯಿ. ಹುಡುಗುರು ಹುಷ್ಟಿ ಜ್ವಾಕೀಲೆ ಇರ್‍ಯಾs. ಅಂಪಾಕರಾ ಉಲಕೋಚಿ ಹುಡುಗರು. ಭಾವಿಕಡೆ ಹೋಗ್ಗೊಡ ಬ್ಯಾಡಾ. ಭಾಂವ್ಯಾಗ ಹಣಿಕಿ ಹಾಕ್ಯಾವು ಎಲ್ಯಾರೆ. ಒಂದು ಹೋಗಿ ಒಂದು ಆದೀತು. ಹಿಂದಿನ ಬಾಗಲಾನ ಇಕ್ಕಿ ಚಿಲಕಾ ಹಾಕು. ಅಂದರ ನಿಶ್ಚಿಂತಿ ಆಗತದ. ಇಷ್ಟು ಹುಡುಗುರ್‍ನ ಕಟಿಕೊಂಡು ಹ್ಯಾಂಗ ಇರ್‍ತೀಯೋ ಏನೋ. ಇದೇ ಚಿಂತಿ ಹತ್ತೇದ ನನಗ. ಅವು ಕಿರಿಕಿರಿ ಮಾಡತಾವಂತ ಸಿಕ್ಕದ್ದ ತಿನ್ಲಿಕ್ಕೆ ಕೊಡಬ್ಯಾಡ. ಬ್ಯಾಸಿಗೆ ದಿವಸ ನೀರು ಕುಡಕುಡದು ಜಡ್ಡಾಗ್ತಾವ ಹುಡುಗರಿಗೆ. ಮನ್ಯಾಗೇನಾರ ಮಾಡಿದರ ಇರಿವಿ ಮುಕರಿದ್ಹಾಂಗ ಮುಕರತಾವ ಖೋಡಿಗೋಳು !

ಹೌದು ನೋಡು. ಮರ್‍ತೆ ಬಿಟ್ಟಿದ್ದೆ. ಇರವಿ ಅಂಬೋಣ ನೆನಪು ಆಯ್ತು. ಬೆಲ್ಲದ ಹರಿವಿ ಬುಡದಾಗಿನ ಪರಾತದಾಗ ನೀರು ಉಳಿದಿಲ್ಲ. ಎಲ್ಲಾ ಇರಿಬೀ ಪಾಲು ಆದೀತು. ಬೆಲ್ಲಾ ನೋಡಪಾ ರಾಮೂ. ನೀನರೆ ನೆನಪಲೆ ನೀರ್‍ಹಾಕು.

ಇಲ್ಲಿದ್ರ ತಟ್ಟಿನಾಗ ಕಟ್ಟಿ ನೆಲವಿನ ಮ್ಯಾಲೆ ಇಡು.ಅಂದರ ತ್ರಾಸೇ ತಪ್ತದ. ಆದೇನು ಹಾಲ್ಮಸರಿನ ಗಡಿಗೆಲ್ಲಾ. ಬೆಕ್ಕು ಹಾರಿ ಕೆಡವು ಹಾಂಗಿಲ್ಲ. ಅಷ್ಟು ಮಾಡಿ ಬಿಡು.

ಬೆಕ್ಕಂಬೂಣಾ ಧ್ಯಾನಕ್ಕ ಬಂತ ನೋಡು. ಈ ಗಾಡಿ ಗಡಿಬಿಡಿಯೊಳಗ ಹಾಲು ಮಸರಿನ ಕಿಡಕಿ ಬಾಗ್ಲಾನs ಹಾಕಿಲ್ಲಾನು. ಗೋವಿಂದಾ ಹಾಕಿಬಾರಪಾ ಬಾಗಲಾ. ಮುಪ್ಪಿನಕಾಲ. ನನಗೂ ಅರವು ಮರವು ಆಗ್ಲಿಕ್ಕೆ ಹತ್ತೇದ. ಕೈಕಾಲೊಂದು ಒಣಗಿ ಹತ್ತೀಕಟಿಗಿ ಆಗ್ಯಾವ. ನೆನಪೊಂದು ಹಾರಲಿಕ್ಹತ್ತ್ಯಂದ್ರ ಆಗೇ ಹೋತು. ಕೃಷ್ಣಾ ನೀ ಮಾಡಿದ್ದೇ ಖರೇಪಾ ಇರ್ಲಿ ! ನಂದೇನ ಯಾಕಾಗವಲ್ದು. ಹತ್ತೀ ಕಟಿಗಿ ಅಲ್ಲೇ ಬಿಟ್ಟರ್ಹೋದ್ರಿ ಬೈಲಾಗ್ಯೆ. ಎಲ್ಯಾರೆ ಒಂದು ಅಡ್ಡ ಮಳಿ ಹೊಡೀತಂದರ ಎಲ್ಲಾ ತೊಯ್ದು ಹೋಗ್ತಾವ. ತಂದು ಎಮ್ಮೆ ಕಟ್ಟೊ ಕೊಟ್ರ್ಯಾಗರ ಇಡಸು ರಾಮೂ; ಮರೆಯಬ್ಯಾಡಾ. ಅಯ್ಯಯ್ಯ. ಎಮ್ಮಿ ಕರಾ ಕಟ್ಟೊದ್ದುದ್ದಾ ಮರ್ತೆ ಬಿಟ್ಟಾನು ! ಮಲ್ಯಾ, ನೀನರೇ ನೆನಪ ಮಾಡಬೇಕೋ ಇಲ್ಲೋ ! ಹೋಗು ಕರಾ ಕಟ್ಟು.

ನಾ ಬರ್ತಿನ್ಯಾ. ಹೂಂ. ಟಾಂಗಾ ಹೊಡೀಪಾ ಇಮಾಮಾ. ಉಡುಪಿ ಯಾತ್ರೀಯವರೆಲ್ಲಾರೂ ಟೇಸನ ತನ್ಕ ಹೋಗಿದ್ದಾರೋ ಏನೋ ! ತಡಾ ಆತ ! ಗಾಡೀ ಸಿಗೂದಿಲ್ಲ ? ಅಯ್ಯ ನನ್ನ ಕರ್ಮ ! ನನ್ನ ನಸೀಬ್ದಾಗಿಲ್ಲ ಉಡುಪಿ ಯಾತ್ರಿ. ದೇವರೇನ್ಮಾಡ್ಯಾನು. ಇರ್ಲಿ. ಹೊರಟದ್ದು ಹೊರಟೇವು ತೊರವಿಗ್ಹೋಗಿ ನರಸಿಂಹ ದೇವರಿಗೆ ಕಾಯರೇ ಒಡಿಸಿಗೊಂಡು ಬರೋಣ. ನಮ್ಮ ಪಾಲಿಗೆ ತೊರವಿ ನರಸಿಂಹ ದೇವ್ರs ಉಡುಪಿ ಕೃಷ್ಣಾಂಬೂಣು. ಇಂದ್ಯಾವಾರ ? ಮಂಗಳವಾರ ! ತೊರವಿಗ್ಹೋಗೂದಾದ್ರ ನಾಳ್ಡ ಬ್ರಸ್ಪತ್ವಾರ ಹೋದರಾತು.

ಇಳಸಪಾ ಸಾಮಾನ. ಏನ್ಮಾಡೂದು ಹರೀ ! ನಿನ್ನಿಛ್ಛಾ !!

# ಕಲಿಯುಗದ ಹರಿಶ್ಚಂದ್ರ

ಅರ್ಥಾತ್

# ಸಾಕ್ಷೀದಾರ

(ವಿಜಾಪುರ ಜೋಣಿಸಾಲಿನ ಭಾಷೆಯಲ್ಲಿದೆ)

ರಾಮಣ್ಣಾ—ನಟ್ಟಕಡಪಾದ್ರೂ ಖರೇತನದಿಂದ ಹೊಟ್ಟೀ ತುಂಬಿಕೋ ಬೇಕಂತ ಶಾಸ್ತ್ರಾ ಹೇಳ್ತಾಕ ಬಂದಾರು ಶಾಸ್ತ್ರಾನ ಏ. ಯಾರು ಕೇಳಿದ್ರ ನನ್ನ, ನಟ್ಟು ಕಡೂಮುಂದs. ಎಷ್ಟ ನಶಿಕ್ಲೆ ಹೋದ್ರೂ ತಡಾಯಾಕಂತ ಕೇಳವ್ರs ಮತ್ತ ನಟ್ಟ ಕಡದ ಮ್ಯಾಲ ಹಂಟಿ ಉಳಿದೂವು ಪಳಿ ಉಳಿದೂವು ಗುದ್ಲಿ ನೆಟ್ಗ ಇಳಿಸಿಲ್ಲಾs ಬಿಸಲ್ನೆತ್ತಿಮ್ಯಾಗ ಬಂದಿಲ್ಲಾs ಇನ್ನೂ ಆರತಾಸ ಆಗಿಲ್ಲಾ ಒಂದs ಎರಡs ನೂರನೆವಾ ಹೇಳಿ ಎರಡು ಸೇರ ಸರಗ ಜೋಳ ಕೂಲಿ ಅಳೀ ಬೇಕಾದ್ರ ಮೂರ್ಕ್ವರೀ ನೀರ್ಕುಡಿಸ್ಬಿಡತಿದ್ರಪಾ, ಗೋಳು. ನಟ್ಟಿನ ಹೊಲದಾಗ ಕಾಕಾಳ್ಳ ಕೂಡಿಸಿ ಚಾ ಮಾಡಿ ಕುಡದದ್ರ ತಮ್ಮಪ್ಪನ ಗಂಟs ಹೋದ್ಹಾಂಗ ಮಾಡತಿದ್ರು. ಎಕ್ಕೀ ಎಲೀ ಬತ್ತಿ ಕಟ್ಟಿ ತಂಬಾಕ ಸೇದಿದ್ರ ಕಂಣು ಕೆಂಪ ಮಾಡ್ತಿದ್ರಣ್ಣಾವರು. ಅವs.

ಈ ಗ್ಹಾಂಗಾಗೇತಿ ? ಗಳಿಗ್ಗೊಮ್ಮೆ ರಾಮಣ್ಣಾ ! ಚುಟ್ಟಾ ಬೇಕ s ಬಿಳಿ ಬತ್ತಿಬೇಕ s ಅಂತ ಕೇಳೀ ಕೇಳ್ಸೂದು. ಹರ್‍ಯಾಗ ಎಳಾಣ ಚಾದಂಗ್ಡಿ ತಿಂದಷ್ಟ ಕಾಸಾ, ಕುಡದಟ್ಟಚಾ. ಎರಡೂ ಹೊತ್ತು ಕಾನಾವಳಿ ಊಟಾ ಕಟ್ಟೀ ತುದಿಗೆ ನಿಂದ್ರಗೊಡ್ತಿದ್ದಿಲ್ಲ ನಮ್ಮನ್ನ ವಕೀಲರಮನ್ಯಾಗ. ಅದs ಈಗ ವಕೀಲರ ಮನೀಗೆ ಹೋಗಾಣಾ. “ ಮ್ಯಾಲೆ ಬಾ ರಾಮಣ್ಣಾ ಇಲ್ಲಿ ಕೂಡಬಾ ಅಲ್ಲಿ ಕೂಡ ಬಾ. ಅಂತ ವಕೀಲರು ಕಾರಕೂನರು ಎಲ್ಲಾರು ಕರ್‍ಯಾವರs. ನನಗೂ ಇದೆಲ್ಲಾ ಗತ್ತು ಗೊತ್ತೈತಿ. ಹಗರ ಎದ್ದು ಈಗ ಒಂಜರಾ ಪ್ಯಾಟ್ಯಾಗ ದಗ ದೈತಿ ಹೋಗಿ ಬರ್‍ತೀನಂತ ಎದ್ದ ಏಳತೀನು. ಏಳಾಣ ಹೀಂಗ ಮಜಾಆಗೈತಿ, ಎಲ್ಯಾರೆ ಸಾಕ್ಷೀ ಒಡದಗಿಡದೀತಂತ ಬೆನ್ನs ಹತ್ತತಾರ.

ಎಲ್ಲೊಂಟಿ ರಾಮಣ್ಣಾ ಅಂತ ಕುಂದ್ರ ಸತಾರ. ಇಲ್ಲಪಾ. ಹಿರ‍್ಯಾಳಿಗೊಂದು ಗಚ್ಚಿನ್ನಡೀ ಸೀರಿ ಬೇಕು. ಪ್ಯಾಟ್ಯಾಗ ಹೋಗ್ಬರ‍್ತೀನಂತ ಅಂತಿದೇನು. ನನ್ನ ಬೆನ್ನತ್ತಿ ಬಂದು ಸೀರಿ ಕೊಡಸ್ತಾರು ಖಣಾ ಕೊಡಸ್ತಾರು. ಎಲ್ಲಾ ಕೊಡಿಸಿ ಮತ್ತ ತಿರಗಿ ವಕೀಲರ ಮನೀಗೆ ಕರಕೊಂಡು ಬರತಾರ. ಈಗತ್ತು, ಮಾಡದ ಹೊರ‍್ತ ಗತೀನ ಇಲ್ಲಾ. ಇಲ್ಲಿದ್ರ ಮನೀಖರ್ಚ ನಡಿಯೂ ಬಗೀ ಹ್ಯಾಂಗ ?

ಹೌದು ಹೌದು ನಾವು ರೊಕ್ಕಾತಗೊಂಡ ಸಾಕ್ಷೀಬರ‍್ತೀವಿ. ನಮ್ಮನೀ ಅನ್ನಾ ಉಂಡು, ನೋಡದ ಕೇಳದ ನೋಡಿದ್ಹಾಂಗ ಕೇಳಿದ್ಹಾಂಗ ಹೇಳ ಬೇಕಾದ್ರ ಪುಗಸಟ್ಟೆ ಐತೆ? ಅದರಾಗ ಅವರ ವಕೀಲ ಹಡ್ಡಿ ಹಡ್ಡಿ ಕೇಳಾಂವಾ. ಎಲ್ಲಿಂತ್ತಿದ್ದಿ ? ಎಲ್ಲುಂತಿದ್ದಿ ? ಮೂರಿ ಯಾವ ದಿಕ್ಕಿಗಿತ್ತು ? ಬೆನ್ನಯಾವ ದಿಕ್ಕಿಗಿತ್ತು ? ಮೂಡಹಾಕಿತ್ತೋ ? ಬಿಸಲ್ಬಿದ್ದಿತ್ತೋ ? ಎಡಕ್ಯಾರಿದ್ರು ? ಬಲಕ್ಯಾರಿದ್ರು ? ಹಿಂದೇನಿತ್ತು ? ಮುಂದೇನಿತ್ತು ? ಅಂತ ಒಂದಕ ಎರಡಕ ಸಾವಿರ ಕೇಳಾಂವಾ. ಅದಕ್ಕೆಲ್ಲಾಕೂ ಜವಾಬ ಕೊಡಬೇಕಾದ್ರ ಮನಿಷ್ಯಾ ಹುಶ್ಯಾರ ಇರಬೇಕು.

ಇಲ್ಲಿದ್ರ ಅಂಡಾಕರಾ ಪೆರಕಿ ಮಕ್ಕಳು ವಕೀಲರು. ಹಗರಕ ಒಯ್ದು ತೆಗ್ಗಿನ್ಯಾಗ ಹಾಕ್ತಾರು. ಸಾಕ್ಷಿದಾರನ ದಗದ ಬಲು ಪೆಂಡ್ಲ ದಗದ. ಸುಳ್ಳಿಂದು ಖರೇ ಹಾಂಗ ಹೇಳಬೇಕು. ಖರೇ ಇದ್ರೂ ಸುಳ್ಳಿನ್ಹಾಂಗಿದ್ರ, ಅದನ್ನು ಹೇಳಬಾರದು. ಹಿಂಗ ಮಾಡಿದ್ರನ ರಾಮಣ್ಣಾ, ರಾಮಣ್ಣಾ ಅಂತ ಕರಕೊಂಡು ಹೋಗಿ ಗೋದಿರೊಟ್ಟಿ ಬಾಳೀಹಣ್ಣ ತಿನಸ್ತಾರ. ಇಲ್ಲಿದ್ರ ಪುಂಡೀಪಲ್ಯಾ ತಂಗಳ ರೊಟ್ಟಿ ಸಿಗಬೇಕಾದ್ರ ಕಣ್ಣೀರ ಕಪಾಳಿಗೆ ಬರ‍್ತಾವ. ತಿಳಿತಕ, ನಟ್ಟ ಗಿಟ್ಟ ಎಲ್ಲಾಸುಳ್ಳು. ಸುಳ್ಳ ಸಾಕ್ಷೀ ನುಡೀಲಾಕ ಕಲೀಬೇಕು ಅಂದ್ರನಕ ನಾಕೊಪ್ಪತ್ತು ದೇವರು ಹೊಟ್ಟಿ ಸಾಗಸ್ತಾನ, ತಿಳೀತ.

# ಆತಿಥ್ಯ



( ಹಳ್ಳಿಯೂರ ಸಭ್ಯಗೃಹಸ್ಥರೊಬ್ಬರ ಮನೆ; ಅತಿಥಿಗಳೊಬ್ಬರು ಮನೆಗೆ ಬರುವರು ಮನೆಯ ಯಜಮಾನನು ಗಡಬಡಿಸಿ ಎದ್ದು ನುಡಿಯುವನು )

" ಅಲಲ ರಾಯರ ಬರೋಣಾಯ್ತೇನು ?.... ಬರಬೇಕ.... ಬರಬೇಕು. ಇದೇನಿದು ಬಡವರ ಮನೀಗೆ ಭಾಗೀರಥಿ ಬಂದಹಾಂಗ ?.... ಇಲ್ಲೆ, ಇಲ್ಲೆ ಮ್ಯಾಲೆ ಕೂಡ್ರಿ ರಾಯರs! ಎಲೋ.... ಯಾರಾವರು.... ? ದಿಂಬೆಲ್ಲಿ ಅದನೋ.... ? ತಾ; ತಾ, ಲಗೂನs ತಾ ! ಏನಪಾ.... ಈ ಹುಡಗೋರು.... ! ಇಟ್ಟದ್ದು ಇಟ್ಟಲ್ಲಿ ಇರಗೊಡೂಹಾಂಗs ಇಲ್ಲ ! ಕೂಡ್ರಿ ರಾಯರs ಕೂಡ್ರಿ.... ! ಹುಡುಗೂರ ಕಾಲಾಗ ಬ್ಯಾಸತ್ತು ಹೋಗಿನ್ ನೋಡ್ರಿ.... ಅತು ಹಾಸಗೀ ಸುರಳೀಗೆ ನಂಬಿ ಕೂತುಗೊಳ್ರಿ ! ಏನು ಚಹ ಆಗಬೇಕೊ, ಕಾಫಿಯೋ, ಹಾಲೊ.... ? ಏನುಬೇಕು ಹೇಳ್ರಿ ! ಒಲ್ಲೇ ಅಂದ್ರ ಕೇಳೂಹಾಂಗಿಲ್ಲ.... ಬಡವರ ಮನೀಗೆ ಬಂದು ಏನು ಹಾಂಗs ಹೋಗತೀರಾ ? ನಾಳೆ ನಿಮ್ಮ ಮನೀ ಮುಂದ ನಾಲಗೀ ಕಿತ್ತಿಗೊಂಡು ಪ್ರಾಣಾ ಕೊಟ್ಟೇನು !."

" ಏ.... ! ಒಳಗ ಹೇಳೊ ರಾಯರಿಗೆ ಸ್ವಲ್ಪ ಸಜ್ಜಗೀ ಮಾಡಂತ ಹೇಳು.... ! ಮತ್ತ ಸಜ್ಜಗೀ ತುಪ್ಪದಾಗ ಕರೀಲಿಕ್ಕೆ ಹೇಳು.... ! ಇಲ್ಲವಿದ್ದರ ಏನ ಕೇಳತೀ ಅದು ಡೋಣಿಸಾಲ ಹೆಣ್ಣು ! ನುಚ್ಚು ಕುದಿಸಿ ಇಟ್ಟೀತು.... ! ಸೀ ಸಜ್ಜಗೀ ಅಂತ ಹೇಳು ಮತ್ತೆ.... ! ಇಲ್ನೋಡು, ಒಮುಗಿಲೆ ಓಡಬ್ಯಾಡ ! ಕಿವಿ ಕಿತ್ತೇನು.... ಪೂರಾ ಕೇಳಿಕೊಂಡು ಹೋಗು ! ಬರೇ ಸೀ ಆದರ ನೆಟ್ಟ-ಗಾಗೂದಿಲ್ಲ, ಸ್ವಲ್ಪ ಅವಲಕ್ಕೀ ಒಗ್ಗರಣೀ ಹಾಕಲಿಕ್ಕೆ ಹೇಳು.... ! ಎಲೆಯಲ್ಲಾ ! ಗೌಡರ ಹಿತ್ತಲಾಗಿಂದs ಕರೀಬೇವು ಇಸಗೊಂಡು ಬಾರೊ— ಅವಲಕ್ಕಿಗೆ–ಅವಲಕ್ಕಿ ಘಮಾ ಘಮಾ ಆಗಲಿ ! .... ಚಹಾಕ್ಕ ಒಂದು ಬ್ಯಾರೆ ಎಸರಿಡಲಿಕ್ಕೆ ಹೇಳು ಸುಳ್ಳs ತಡಾ ಮಾಡಬ್ಯಾಡ್ರಿ ! "

“ ಎಲೊ—ಅಳಮಾರೀಗಂಡೇ ! ಗಂಡಸಃ ನೀನು ?.... ‘ ಸಕ್ರಿಲ್ಲಾ–ಚಹಾ ಇಲ್ಲಾ– ’ ಹೇಳಲಿಕ್ಕೆ ಬಂದಾನ ಅತುಗೋತ.... ! ಹೋಗು ಓಡು ಜಲ್‌ದಿ...., ಚಿನಬಸಪ್ಪನ ಅಂಗಡಿಗೆ ಹೋಗು, ನಾ ಹೇಳಿನಿ ಅಂತ ಹೇಳು ! ಅತಗೋತಾಃ ತಿರಿಗಿ ಬರಬ್ಯಾಡ ! ಕಾಲು ಮುರದೀನು, ಹಾಂಗ ಹೀಂಗ ಅಂತ ಚಿನಬಸಪ್ಪ ಅದs ಮಾತು ಹಚ್ಚ್ಯಾನು...., ರಾಯರು ಬಂದು ಕೂತಾರಂತ ಹೇಳು, ಇಲ್ನೋಡು.... ಹಂಗಃ ನಾಲ್ಕು ಅಡಕಿ ಒಂದ್ನಾಲ್ಕು ಲವಂಗ, ಒಂದು ಕಾಚಿನ ಹಳ್ಕು ಕೊಡಂತ ಹೇಳು—ಚಿನಬಸಪ್ಪಗ.... ! ಲಗೂ ಬಾ, ಬಿಸಲಾಯ್ತು.... !

“ ಏನಂತಾರೋ ಒಳಗ.... ? ತುಪ್ಪಿಲ್ಲಂತ.... ? ಇಷ್ಟೊತ್ತು ಏನು ಮಾಡತಿದ್ಲು.... ! ಹೇಳಲಿಕ್ಕೇನಾಗಿತ್ತು—ಹುಣ್ಣಾಗಿತ್ತೇನು ಬಾಯಿಗೆ.... ? ತುಪ್ಪ ತೀರಿಹೋಯ್ತೇನು ? ಇದಃ, ಇಂದ ಇನ್ನೂ ಮಂಗಳವಾರ.... ಶನಿವಾರ ಸಂತೀ ದಿನ ಮೂರು ಸೇರು ಬೆಣ್ಣಿ ತಂದಿತ್ತು.... ; ಏನು ಎರಕೋತಾಳೋ ಏನೊ ತುಪ್ಪದಲೆ ! ಎಷ್ಟು ತಂದರೂ ಈಡಃ ಆಗೋದಿಲ್ಲ.... ! ಹೋಗೋ ದಾನೂ; ಕುಲಕರ್ಣ್ಯಾರ ಮನ್ಯಾಗ ತುಪ್ಪಾ ಇಸಗೊಂಡು ಬಾ.... ಸಂತೀ ದಿವಸ ಕೊಡತೀವಂತ್ ಹೇಳು ! ಕೂಡ್ರಿ ರಾಯರಃ ತಡಾ ಆತ್ಯ ! ಹತ್ತ-ನಿಮಿಷದಾಗs ಚಹಾ ಆಗತದ.... ; ಎಂದೂ ಬಾರದವರು. ಹಂಗs ಕಳಿ-ಸೂದು ನಮ್ಮ ಧರ್ಮಃ ?

“ ಏನದೂ.... ? ಗುರೂಗುರೂ ಸಪ್ಪಳ್ಯಾತರದು ? ಸಜ್ಜಗೀ ಒಡೀತಾರ .... ? ಬೇಶ್ ಬೇಶ್ ಇದ್ದರಿಂಥಾ ಹೆಣ್ಣು ಇರಬೇಕು.... ; ಲಗೂ ಆಗಲೀ ಅಂತ ಹೇಳು. ರಾಯರು ಹಸದಿದ್ದರು.... ”

( ಒತ್ತಾಯದ ಕೆಮ್ಮನ್ನು ತಂದುಕೊಂಡು ಖೇಕರಿಸಿ ಉಗಳಲೆಂದು ಹೊರಗೆ ಹೋದ ರಾಯರು ಮೊಚ್ಚೆಯ ಪರಿವೆಯಿಲ್ಲದೆ ಊರಿನ ವರೆಗೆ ಓಡಿ ಬಿಟ್ಟರು. )

# ಜೀವಂತ ಜ್ವಾಲಾಮುಖಿ

## ಅಥವಾ

# ಹಳ್ಳಿಯ ಸೊಸ್ತ್ಯಾರು

''ಅಯ್ಯ ಶಿವನss........,' ಸೊಸ್ತ್ಯಾರು ಮಕ್ಕಳು ನೂಲಕ್ತಿದ್ದರ ನನ್ನ ಗತಿ ಹಿಂಗ್ಯಾಂಕ ಆಗತಿತ್ತೊ ಯಪ್ಪಾ!........ಇವರೆಲ್ಯಾರೇ ದಗದಾ ಮಾಡವರs ದಗದಾ ? ಹತ್ತಿ ಅರೀಲಾಕ ಕಲ್ಲ ಇಡ್ರೇ ಅಂದರ ನಡಾ ನೂಸ ತೈತಿ. ಹಿಂಡ್ರಿ ನೂಸತಾವು....ಅಂತಾರು ! ಒಂದs ಒಂದ ಧಡೆ ಕಾಳು ಅರೂ ಡ್ರಾಗs ಚರೀನ ಕಟ್ಟ್ಯಾರ ಮ್ಯಾಗಿಂದ ತೆಳತನಕಾ ! ಇದರಾ ಬದರಾ ಕಟ್ಟೀ ಪ್ಯಾಗ ಕುಂತು ಚಕ್ಕಂದ ಆಡಲಾಕ ಕಲ್ತ್ಯಾರ ಚಕ್ಕ್ಯಂದಾ !!!

" ಎಮ್ಮಿ ಮೈತೊಳಕೊಂಡ ಬಾ ಅಂದರ ಹಳ್ಳದ ದಂಡಿ ಪ್ಯಾಗ ಹಿಂಬಡಾ ತಿಕ್ಕೊಂತs ಕೂಂಡ್ರ್ಯತಾಳ ನನ್ನ ಸೊಸಿ....! ಎಮ್ಮಿ ಬಾಲಕ್ಕ ಹತ್ತಿದ್ದ ಹೆಂಡಿ (ಶೆಗಣಿ) ಹಂಗs ಇರತೈತಿ.... ಈ ಚದುರಿ s ಮುರಕಾ ಮಾಡಿಕೊತ್ತೇ s ತಿರತಿರಗಿ ಹಿಂಬಡಾ ನೋಡಿಕೋತ ಬರತಿರತಾಳ ಓಣಿಗುಂಟ. ಇಕಿ ಹೀಂಗ ಬರೂದರೊಳಗs ಎಮ್ಮಿ, ಕರೀಗೆ ಹಾಲುಣಿಸಿ ಬಿಟ್ಟಿರತೈತಿ....ಆತಲ್ಲಾ ಮುಗದs ಹೋತು "

" ಇವರನ್ನ ಸಂತಿ ಮಾಡಿಕೊಂಡು ಬರಲಾಕ ಕಳಸೂದs ಪಂಚೇತಿ ಐತಿ....ಮುಂಗೈ ಮ್ಯಾಲಿನ ಹಚ್ಚೀಬಟ್ಟು ನೋಡಿಕೋತ ತಕ್ಕಡೀ ಹಿಡಿದರ ಏಲ್ಯಾರೆ ತೂಕ ಆಕ್ಕೈತೆ ? ಅದರಾಗೂ ಕಳಕೊಳ್ಳೂದು ಮಾತ್ರ. ಬೆಣ್ಣೀ ಮಾರಿ ಕಂಡ್ಹಾಳ (ಕನ್ನಡಿ) ಕೊಳ್ಳೂ ಅವರನ್ನ ನೀ ಎಲ್ಲ್ಯಾರ ನೋಡೀದೀಯಾ ಯಪ್ಪಾ ? ಹುಟ್ಟಿ ಮೂರಿಪ್ಪತ್ತ್ಯಾರ ಮ್ಯಾಲೆ ಹತ್ತ್ಯವರಸ ಆದೂ........ನಾ ಹೆಣ ಮಗಳ ಇನ್ನೂವರಿಗೂ ಒಂದಿಸಾ ಕಂಡ್ಹಾಳ ಕೈಯಾಗ ಹಿಡಿದಿಲ್ಲ....? ಈಕಿ ನನ್ನ ಸೊಸಿ !....ಮುಚ್ಚ್ಯಾಲು ಕೊಟ್ಟು ಕಂಡ್ಹಾಳ ಕೊಂಡುಕೊಂಡು ಬಂದಾಳ. ಇದಕ್ಕ ಏನಿನ್ನ ಹಣೀಹಣೀ ಗಟ್ಟಿಸಿಕೊಂಡ್ರನs ಸರಿ ! ಸಂತಿಗೆ ಹೋಗೂ

ದಂದರಃ ಎಲ್ಲಮ್ಮನ ಜಾತರಿಗ್ಹೋದ್ಹಾಂಗ ಮಾಡ್ತಾರ. !ಇವರ ಆದವಾನೀ ಕರಿ ಅಂಚಿನಸೀರಿ ಇವರ ಜರಾಗೊಂಡೇವಹಚ್ಚಿದ ಚಿಪ್ಪಲಿ ಏನ ಹೇಳ್ಳ್ಯೊ ಯಪ್ಪಾ ; ಎಲ್ಲಾ ದಿವಸಾನ್ಸ ಉಪರಾಟೇ ಬಂದಾವು ! "

" ಗಂಡಂದಿರ ಅಂಜಿಕ್ಯಂತ !.... ಇದಕೇಳ್ರಿ ನಗ್ಗೇಡು.... ! ಗಂಡಂದಿರ ಅಂಜಿಕೆ ಇವರಿಗೆ ಎಲ್ಲೈತೊ ನನ್ನ ಮಗನ್ಸ ! ಹೆಂಡಂದಿರ ಸೀರಿ ಒಗೆಯೊ ಈ ಹೊಲಸ ಗೋಳು, ಹೆಣತಿನ್ನ ಅಂಜಿಕ್ಯಾಗಿಡತಾವಃ ಅಂಜಿಕ್ಯಾಗ....! ಇವು ಎಲ್ಯಾರೆ ಬಲೂರೀ.... ಹಾಕ್ಕೊಂತ ಗೊಬ್ಬರ ಬಂಡೀನ ಹೊಡೀಬೇಕು. ಹೆಂಡರು ಇವರ ಮಾತ ಕೇಳಿದರ ಮಳೀಬೆಳಿ ಯಾಕ ಹೋಗತಿತ್ತು ! "

" ಈಗಿನ ಕಾಲನಃ ಬ್ಯಾರೆ ಬಂದೈತಿ.... ! ನೂಲವರೆಲ್ಲಾ ಸತ್ತಸತ್ತ ಹೋದರು.... ; ಇಲ್ಲೆ ಈ ನ್ಯಾಮದೇವರ ಕಟ್ಟೀಮ್ಯಾಗ ಆರಾರು ತಾಸು ರಾತ್ರೀ ತಂಕಾ ' ರಂವ್ ರಂವ್ ' ಅಂತ ನೂಲೂದ್ಸ ನೂಲದು.... ; ಸೇರು ಹಂಜೀ ನೂಲೂದರೊಳಗ ಗಿರಪಾವು ಕಡ್ಲೀ ತಿಂತಿದ್ಲು ನಮ್ಮ ಅತ್ತಿ....! ಈಗಿನ ಹೆಣ್ಣಾs ! ಹಾಲೂ ಅನ್ನಾ ಉಂಡು ಹಾಸು ಹೊಯ್ಯ್ಕ ನನ್ನ ಮಗಳ್ಸ ಅಂದರs ನಾ ಊರನ್ನ ನೋಡಿಕೊಂತಃ ನೀರ ತರತೀವಿ ಅಂತಾವು, ತಮ್ಮಾ.... ? ನೋಡೊs ಯಪ್ಪಾ ನೋಡು; ನಾ ಬೇದ್ಸ ಬೆಯ್ಯತೇನು, ಅವಕ್ಕ ಏನಾರೆ ಬುದ್ಧಿ ಐತೇ ನೋಡು ಹ್ಯಾಂಗ ಖಿಸಿ ಖಿಸಿ ಹಲ್ಲ ಕಿಸೂತಾವ ! ಸುಟ್ಟಶಿವಾ ಮರತಾನ್ನ ನನ್ನ ! ಏನು ಮಾಡೂದೈತಿ ?.... ಅಷ್ಟs ಉಪ್ಪು ಮೆಣಸಿನಕಾಯಿ ಆದೀತು. ಬಡತನದ ಜಲಮು ಯಪ್ಪಾ.... ! ಕಾರಹುಣ್ಣಿವೀ ಆಗಾಣಾ ಜಂತ್ರಾ ಇಡತೇನಿ ತಮ್ಮಾ ! ಇವರೀಗೇನ ಇಲ್ಲಿದ್ರೂ ? ನನಗ್ಯಾಂಗ ಬಿಟ್ಟೇ-ತಪ್ಪಾ ನೋಡ್ರಿ !!! "

# ದೇವರ ಪೂಜೆ



( ಮನೆಯ ಯಜಮಾನರಿಗೆ ದೇವರಲ್ಲಿ ತುಂಬಾ ಶ್ರದ್ಧೆ. ಸ್ವತಃ ಪೂಜೆ ಮಾಡಿ ನೈವೇದ್ಯ ತೋರಿಸದಿದ್ದರೆ ಮನಸ್ಸಿಗೆ ಹೇಗೊ ಹೇಗೊ ಎನಿಸುವ-ದೆಂದು ಯಾವಾಗಲೂ ಅವರು ಹೇಳುವರು ಇಂದು ಸ್ನಾನಮಾಡಿ ದಿನ-ದಂತೆಯೇ ಯಜಮಾನರು ದೇವರ ಕಟ್ಟೆಯ ಮೇಲೆ ಪೂಜೆಗೆ ಕುಳಿತಿರುವರು. ದೇವರ ಕಟ್ಟೆಯ ಎಡಪಕ್ಕದಲ್ಲಿಯೇ ಅಡಿಗೆಯ ತಗ್ಗಿನಕಟ್ಟೆ. ಹೆಣ್ಣು ಮಗಳೊಬ್ಬಳು ಅಡಿಗೆ ಮಾಡುತ್ತಿರುವಳು. ರಾಯರ ಪೂಜೆಗೆ ಆರಂಭ ವಾಗುವದು. )

"ಓಂ ಕೇಶವಾಯನಮಃ ನಾರಾಯಣಾಯನಮಃ ಓಂ ದಾಮೋದರಾಯ ನಮಃ ಏ ಗೋದೀ ಸಪ್ಪಗೀನ ತಪ್ಪಿಗೆ ಬ್ಯಾರೆ ಬ್ಯಾಳಿ ತಗದೀಯೋ ಇಲ್ಲೊ ? ಹೂಂ ! ಬೇಶ್ ! .... ' ಪ್ರಣವಸ್ಯ ಪರಬ್ರಹ್ಮಋಷಿಃ '....ಎಲೇ ಕೃಷ್ಣ್ಯಾ ಬಾಳಿ ಎಲೀ ನೆಟ್ಟಗಮಾಡು....ಸುಮ್ಮನ ಅಡ್ಡ್ಯಾಡಬಾಡ !....' ಪಾಂತ್ವಸ್ಮಾನ್ ಪುರಹೂತ ವೈರಿ ಬಲವಾನ್' ಬದನೀಕಾಯಿ ಎಳೀವಪ, ಇಂದ ತುಂಬ ಗಾಯಿ ಪಲ್ಯಾ ಯಾಕ ಮಾಡಲಿಲ್ಲಾ ? ಇದನ್ನೂ ಹೇಳಬೇಕs ? ಗಿಂಜಗಾಯಿ ತುಂಬಗಾಯಿ ಮಾಡತಿರತೀ ಒಮ್ಮೊಮ್ಮೆ ! .... 'ಲಕ್ಷ್ಮೀಕಾಂತ ಸಮಂತತೊ ವಿಕಲಯನ್....' ಏ ರಾಮ್ಯಾ, ಕಷ್ಟಾ ಮಾಡಿಸಿಗೊಂಡು ಲಿಸಲಿಸೀ ಹೋಗ ಬ್ಯಾಡಾ—ಊಟಕ್ಕೂಡೂ ಜಾಗಾದಾಗಿಂದs ! ' ಉತ್ಕಂಠಾ ಕುಂಠಕೋಲಾ' ಸಾಲಿಗ್ರಾಮಕ್ಕ ಈ ಜೆಳ್ಳಿ ಸಂಪುಷ್ಟ ಸಣ್ಣದಾಗೇದ ! ಡೊಗ್ಗಾಲ ಕೃಷ್ಣಗ ಭಂಗಾರ ನೀರು ಕುಡಿಸಬೇಕು ! ಅಣ್ಣಾಚಾರು ಕುಡಿಸ್ಯಾರs....ಛಂದಾಗೇದ! ' ಜನ್ಮಾಧಿವ್ಯಾದಿಪಾಧಿ ' ಚಟ್ನಿ ಯಾತರದು ಕುಟ್ಟೀರಿ ? ಹಸೀ ಖೊಬ್ಬರೀ ಸಿಗಲಿಲ್ಲ? ಬ್ಯಾಸರ, ಪ್ಯಾಟ್ಯಾಗ ಹೋಗಬೇಕು ಯಾರು ? ಖಂಡಟ ಖೊಬ್ರೀ ಚಟ್ನಿ ತಿನಬೇಕs ಎಲ್ಲಾರು ಮೈಗಳ್ಳರು !.... ' ಮಧ್ವಾಂಖ್ಯಂ ಮಂತ್ರಸಿದ್ಧಂ ' ಲಗೂ ಲಗೂ ಆಗಲಿ ಅಡಗಿ, ಕಚೇರಿಗೆ ಹೋಗಬೇಕಾಗೇದ, ಇಂದ ಪೆನಶನ್ ತಗೊಳಿಕ್ಕೆ ! ಎಲಾ ರಾಮ್ಯಾ ! ಅಗಸರಾತ ಅರಿವೀ ತಂದನೊ ಇಲ್ಲೊ

ನೋಡು! ಇಸ್ತ್ರಿ ಮಾಡ್ಯಾನೊ ಇಲ್ಲೊ ನೋಡು!.... ಕಣ್ಣು ಮುಚ್ಚಬ್ಯಾಡಾ. ಹುಡಗೋರು ಹ್ಯಾಂಗ ಚಕ್ ಚಕ್ ಇರಬೇಕು! 'ಸಾಭ್ರೋಷ್ಣಾಭೀ ಶುಶುಭ್ರಾ' ಗೋದೀ, ಭಕ್ರಿಹಿಟ್ಟು ಮುಗಿಸಿ ಬಿಡಬ್ಯಾಡ! ಒಲಿವ್ಯಾಲೆ ಹಾಂಗs ಸ್ವಲ್ಪ ಹಂಚು ಇಟ್ಟೇರು! ಊಟಕ್ಕ ಕೂತಾಗs ಒಂದು ಬಿಸಿ ಬಿಸೀ ದಮಟೇ ಮಾಡಿ ಹಾಕೇ ಅಂತ....! ಹಲ್ಲಿಂದೊಂದು ತ್ರಾಸನs ಆಗೇದ.... ಪೂರಾ ಅರೆ ಬಿದ್ದು ಹೋಗವೊಲ್ಲೂ. ಹೆಡಮಾಸ್ತರ್ರ್ಹಂಗ ಹೊಸಾ ಹಲ್ಲು ಕೂಡಿಸಬೇಕಂದರ...! 'ಆನಂದಾನ್ಮಂದ ಮಂದಾ' ಹುಳೀಗೆ ತುಪ್ಪದ ಒಗ್ಗರಣೀ ಹಾಕು— ಗಂಟಲ್ಯಾಕೊ ಘುಸೂ ಘುಸೂ ಅಂತದ.... ಲುಚ್ಚ್ಯಾರು ಈಗ ಎಣ್ಣೀ ಒಳಗ ಭಯಿಮಂಗದ ಎಣ್ಣಿ ಕೂಡಸ್ತಾರ! (ಖೇಕರಿಸಿ) ಮರೀಬ್ಯಾಡ.... ತುಪ್ಪದ ಒಗ್ಗರಣೀ ಕೊಡು....! 'ವಂದೇಹಂತಂ ಹನೂಮಾನ್' ಅಕ್ಕದಾಸ ಭಟ್ಟ ಕಳಿಸಿದ ಗಂಧಕೊರಡು; ಭಾಳವಾಸ ಅದs ಇದು; ಸಾಣೀಕಲ್ಲೊಂದು ಸಂವದು ಹೋಗೇದ....; ಎಷ್ಟು ಹೊಡೀತು ನೋಡು ಕೃಷ್ಣಾ.... ಹನ್ನೊಂದs? ಅಬ್ಬಾ! ಹಾಂ, ಹಾಕು ಎಲಿ, ತಗೀ ನೈವೇದ್ಯ....? 'ವಂದೇ ವಂದ್ಯಂ ಸದಾನಂದಂ....' ಸೀತಾಬಾಯಿ, ಮಣೀ ಹಾಕು! ನನ್ನ ಮಣೀ ಎಲ್ಲಿ ಅದs? ದಿನಾ ಹೇಳಬೇಕೇನು? ನೋಡು, ಎಲ್ಲಾರದೂ ಸ್ನಾನಾಗೇದೊ ಇಲ್ಲೊ....? 'ಸುಜನೋದಧಿ ಸಂವೃದ್ಧಿ....' ಹೂಂ ಬಡಿಸಲಿಕ್ಕೆ ಸುರೂ ಮಾಡು. ಈಗ ನೈವೇದ್ಯ ಇಡತೀನಿ! ಲಿಂಬಿಹಣ್ಣು ಹೆಚ್ಚರಿ, ದಿನಾ ಮರೀತೀರಿ. ಸುಳ್ಳೇ ಒಣಗೀ ಹೋಗತಾವ ಅವು! 'ಮಂಗಲಾನಿ ಭವಂತು ಸಂತತಂ ಶ್ರೀರಸ್ತು....! ಆತು ಮುಗೀತs ನನ್ನ ಪೂಜಿ! ಯಾವಾಗ ಒಂಭತ್ತು ಘಂಟೇಕ ಸ್ನಾನಾಮಾಡಿ ಕೂತೀನಿ, ಹನ್ನೊಂದು ಹೊಡೀತೀಗ! ಉಪ್ಪಿನಕಾಯಿ ತಗದಿಲ್ಲs? ಉಪ್ಪಿನಕಾಯೀ ಅಂದೆ! ಪ್ರಥಮೊ ಹನುಮನಾಮ...' ತೀರ್ಥಾ ತಕ್ಕೊಳ್ಳಿರೊ ಹುಡುಗೂರ್‍ಯಾ! ಉಪ್ಪಿನಕಾಯಿ ಇಲ್ಲಿದ್ರ ಇಲ್ಲ; ಸ್ವಲ್ಪ ಮೆಂತೇದಹಿಟ್ಟು ಹಾಕು! ಅಕ್ಷಂತೀ ತಗೊ ಕೃಷ್ಣಾ!.... ಮುಟ್ಟೀ ಹೋಗಕಡೆ! ಹೂಂ ಕೂಡ್ರಿ ಎಲ್ಲಾರೂ! ಶ್ರೀಮದ್‌ರಮಾರಮಣ ಗೋವಿಂದಾsssಗೋ.... ಇಂದಾ!"

(ಯಜಮಾನರು ಆಪೋಶನ ತೆಗೆದುಕೊಂಡು ಊಟಕ್ಕೆ ಪ್ರಾರಂಭಿಸುವರು.)

---

# ಹೊಯಮಾಲಿ

## ಅಥವಾ

# ಮುತ್ತಿನ ಬೆಂಡವಾಲಿ

( ನಡುಮನೆಯ ಬಾಗಿಲ ಒಳಬದಿಯಲ್ಲಿ ಗಂಗಾಬಾಯಿ ನಿಂತಿದ್ದಾಳೆ. ಶಾಮರಾಯರು ಕಚೇರಿಯಿಂದ ಬಂದು ಪಡಸಾಲೆಯೊಳಕ್ಕೆ ಪ್ರವೇಶಿಸುವರು. ಸಮಯ ಸಂಜೆಯ ಆರು ಗಂಟೆ. ಬೇಸಿಗೆಯ ಕಾಲ. ಗಂಗಾಬಾಯಿ ಒಬ್ಬಳೇ ಮಾತನಾಡುವಳು; ಕೇಳುವವರು ಶಾಮರಾಯರೊಬ್ಬರೆ )

" ಅಯ್ಯs! ಈಗ ಬಿಟ್ಟಿತೇನು ಹಾಂಗಾದರ ಕಚೇರಿ....? ಯಾವಾಗ ಹನ್ನೊಂದು ಘಂಟೇಕ್ಕ ಸುರುವು ಆದ್ರ ಸಂತೆನಕಾ ದುಡದು ದುಡದು ಜೀವ ಸಣ್ಣ ಆಗತ,ದ....! ಬಿಸಿಲಂತೂ ಹೇಳೂಹಾಗಿಲ್ಲ.... ಸದರಾ ಶರ್ಟು ಎರಡೂ ತೊಯ್ದು ಹೋಪ್ಹಾಂಗ ಕಾಣಸ್ತಾವ. ! ತರ್ರಿ, ಎರಡೂ ತರ್ರಿ ಒಣಗಲಿಕ್ಕೆ ಹಾಕತೀನಿ.

ಸ್ನಾನ ಮಾಡತೀರೋ ಏನು ಬರೇ ಕೈಕಾಲು ತೊಳಕೋತೀರೋ ?.... ಫರಾಳ ಮಾಡಲಿಕ್ಕೆ ಏಳ್ರಿ....; ಈಗ ಬರತಾರ ಮತ್ತ ಮಾರವಾಡ್ಯಾರು— ಲೆಖ್ಖದ ಗಂಟು ತಗೊಂಡು....! ಸುಡ್ಲಿ ತಾಯಿ! ಮುಂಜಾನೆ ಕಚೇರಿ; ಮಧ್ಯಾನ ಕಚೇರಿ ಮತ್ತ ಸಂಜೀನ್ಯಾಗ ಸುದ್ಧಾ ಇವರ ಕಾಟ ಅದsನs! ನೀವಂತ ಇಷ್ಟೆಲ್ಲಾ ತಾಳಿಕೋತೀರಿ..... ಮತ್ತೊಬ್ಬರ್ಯಾರಾದರೂ ಆಗಿದ್ದರ ಮೂರುದಿನಾ ಏನೂ ಪುರೋಸತಿದ್ದಿಲ್ಲ. ನಡೀರಿ.... ನೀರ ಮನೆಗೆ!

* * * *

" ಅಯ್ಯ.... ಬಿಡ್ರಿ ಸಾಕು, ಥಣ್ಣಗಿನ ನೀರು ಭಾಳ ಸುರುವಿಕೊಳ್ಳ ಬ್ಯಾಡ್ರಿ! ಥಂಡಿಗಿಂಡ್ಯಾದೀತು. ಅಲ್ಲೇ ಮಳೀಗೆ ಟಾವೇಲ ಅದ ತೊಗೊಂಡು ಒರಿಸಿಕೊಳ್ರಿ! "

* * * *

" ಒಡೀ ಹ್ಯಾಂಗ ಆಗ್ಯಾವ ?.... ಅಂ ನೋಡ್ರೀ, ನಾಯಕರ ಕೇಸಪ್ಪ ಭಾಳ ಹರೇಮಿ !.... ಮಾತಿನ್ಯಾಗಂತೂ ಅವನ ಕೈ ಹಿಡ್ಯಾವರು ಯಾರೂ ಇಲ್ಲ....; ಇಂದ ಮಧ್ಯಾಂದಾಗ ಭೆಂಡವಾಲೀ ಜೋಡು ತೊಗೊಂಡು ಬಂದಿದ್ದ — ಮುತ್ತಿನ್ದೂ !.... ' ಗಂಡಸರು ಮನ್ಯಾಗಿಲ್ಲ.... ನೀ ಬರಬ್ಯಾಡ. ' ಅಂತ ಹೇಳಿಬಿಟ್ಟೆ.—ಆತಗ....! ಕೇಸಪ್ಪಾ ಎಷ್ಟ ರಿಷೀ ಇದ್ದಾನ ನಿಮಗ ಗೊತ್ತಿಲ್ಲ ಕಾಣಸ್ತದ....! ' ನೋಡ್ಯಾರೆ ನೋಡ್ರಿ; ಮುತ್ತು ಭಾಳ ಅಗ್ಗ ಆಗ್ಯಾವ.... ಕಣ್ಣಿಲೆ ಒಮ್ಮೆ ನೋಡ್ರಿ, ಆ ಮ್ಯಾಲೆ ಬ್ಯಾಡಾ ಅಂದೀರಂತ....! ' ಅಂತ ಹೇಳ ಹೇಳತ ಪಡಸಾಲೀ ಕಟ್ಟೆಮ್ಯಾಲ ಕೂತ ಥೈಲೀನs ಬಿಚ್ಚಿದ....;–ಖಾರ ಸಜ್ಜಿಗಿ ಹಾಕಲಿ? – ನಾ ಭೆಂಡವಾಲಿ ನೋಡೂದೇ ಇಲ್ಲಾsಂತ ಹೇಳಿದೆ. ಅದೇ ವ್ಯಾಳ್ಯಾದಾಗs ನಮ್ಮ ಕಾಥೋಟಿ ಬಯ್ಯಕ್ಕ ಬಂದಿದ್ರು— ಸುಮ್ಮನs ಭೆಟ್ಟಿಗಂತ ! ' ಅವರಿಗೆ ತೋರಿಸ್ತೇನಿ ನಿಮಗೇನೂ ತೋರಸೂದಿಲ್ಲ ' ಅಂತ ಕೂತಬಿಟ್ಟ ಕೇಸಪ್ಪ ! ಮುತ್ತು ಇಷ್ಟೊಂದು ಅಗ್ಗ ಆಗ್ಯಾವಂತ ನನಗ ಗೊತ್ತೇ ಇದ್ದಿದ್ದಿಲ್ಲಾ.... ; ಥೆಲೊ ತೊಗರೀ ಕಾಳಿನಷ್ಟು ಅವ—ಒಂದೊಂದು ಮುತ್ತು ' ಕಿವಿಯೊಳಗs ಇಟಕೊಂಡು ನೋಡ್ರಿ ' ಅಂತ ಅನ್ನಿಲಿಕ್ಕೆ ಹತ್ತಿದ ಕೇಸಪ್ಪ. ಬಯ್ಯಕ್ಕಗ ' ನಾ ಮುದುಕಿ ನನಗ್ಯಾತಕ್ಕ ಬೇಕs ತಾಯೀ ! ನೀ ಇಟಗೊ ' ಅಂತ ನನಗ ಆಗ್ರಹ ನಡಿಸಿದರು ಬಯ್ಯಕ್ಕ! ಮೊಸರು ಹಾಕಲೇನು ಇನ್ನಷ್ಟು ?.... ವಡೀ ಛಲ್ಲಬ್ಯಾಡ್ರಿ—ನಿಮ್ಮದು ಮೊದಲs ಸಿಟ್ಟಿನ ಸ್ವಭಾವ; ನನಗಂತೂ ಅಂಜಿಕೀನೇ ಬಂತು.... ಆ ಬೆಂಡವಾಲೀ ಇಟಗೋಳೂ ವ್ಯಾಳ್ಯಾಕs ನೀವೂ ಕಚೇರಿಂದ ಬಂದು ಬಿಟ್ಟಿದ್ದರ ಅಲ್ಲೇ ಕೂತ ಬಿಡತಿದ್ದೆ ಕಾಲ ಕಳ್ಕೊಂಡು ! ಬಯ್ಯಕ್ಕ ಬಿಡ್ಲೇ ಇಲ್ಲ.... ಬೆಂಡವಾಲೀ ಇಡಿಸಿ ಕನಡೀ ಮುಂದ ಒಯ್ದು ನಿಂದರಿಸಿದರು.... ' ಭೆಂಡವಾಲಿ ಭಾಳ ಒಪತಾವ ನೋಡು ನಿನಗ ' ಅಂತ ಹೇಳಿ ಗಲ್ಲದ ಮ್ಯಾಲ ಕೈಯಾಡಿಸಿ ಲಟಕೀ ಮುರದರು—ಬಯ್ಯಕ್ಕ.... ನನಗ ನಾಚಿಕಿಸಾವು ಬಂತು ತಾಯೀ ! ಆದರೂ ಕೇಸಪ್ಪಾ ಬ್ಯಾಡಾ ಬ್ಯಾಡಾ ಅಂತಿರೋವಾಗs ನಾ ಭೆಂಡವಾಲಿ ಬಿಚ್ಚಿ ಬಿಟ್ಟೆ !.... ನನಗ್ಯಾತಕ್ಕಬೇಕು ಅಂಥಾ ಭಾರಿ ಭೆಂಡವಾಲಿ! ಕಾಕಾ ಅವರು ಕೊಂಡುಕೊಡಬೇಕಾಗಿತ್ತು.... ಯೋಳೆಂಟುನೂರು ರೂಪಾಯಿ ಖರ್ಚು ಮಾಡಿ, ಅವರು ಭೆಂಡವಾಲೀ ಕೊಡಿಸಬೇಕಂತ ನಾಯಾಕ ಆಶಾ ಮಾಡಬೇಕು ?.... ನಿಮ್ಮಂಥವರ ವಾರಿಗಿ

ಪಗತಾನ ಇರುವಾಗ ( ಆ ವಸ್ತ್ರ ) ತೊಂಗೊಂಡs ರೆ ಏನು ಮಾಡೂದು ?— ಮುತ್ತು ಆಗ್ಗ ಆಗ್ಯಾಪ; ಈಗ ಕೊಂಡರ ಕೊಳಬೇಕು— ಇಷ್ಟs ಅಪೇಕ್ಷಾ ! ಅಯ್ಯಯ್ಯ ! ತುಪ್ಪಾ ಹಾಕತ್ತೀನಿ ತಡೀರಲ್ಲಾ— ಚಿರೊಟ್ಯಾ ಹಂಗs ತಿಂದರ ಹೊಟ್ಟಿ ಕಡೀಲಿಕ್ಕಿಲ್ಲೇನು ?— ಕೇಸಪ್ಪಂದು ಎಲ್ಲಾ ಚಮತ್ಕಾರs ! ಬ್ಯಾಡಾ ಬ್ಯಾಡಾ ಅಂತಿರಲಿಕ್ಕೇ ಬಿಟ್ಟು ಹೋಗ್ಯಾನ ಭೆಂಡವಾಲೀ! ನೋಡ್ರಿ ಬೇಕಾದರ ಇಟುಗೊಂಡೇ ತೋರಸ್ತೀನಿ ! ( ಇಟುಗೊಂಡು ಬಂದು ) ಒಪ್ಪೊದಿಲ್ಲs ಭೆಂಡವಾಲಿ ? ಹೋಗ್ರಿ ಚಾಷ್ಟಿ ಮಾಡಿದರ ನಾ ಮಾತಾಡೂದೇ ಇಲ್ಲ.... ! ಸರಬತ್ತು ಮರತು ಎದ್ದೀರಿ, ಬೆಳ್ಳಿವಾಟಗಾದಾಗಿಂದು ಕೇಳೂದು ಹೌದಲ್ಲೊ ಭೆಂಡವಾಲಿ ? ’ ( ಪಾಪ ಶಾಮರಾಯರು ! ಬಾಯಲ್ಲಿ ಚಿರೋಟ್ಯಾದ ತುತ್ತು ಇದ್ದದ್ದರಿಂದ ಸುಮ್ಮನೆ ಗೋಣು ಹಾಕದೆ ಬೇರೆ ಉಪಾಯವೇ ಉಳಿಯಲಿಲ್ಲ. ಚಿರೋಟಿಯ ತುಂಬ ತುಪ್ಪದ ಸೂರೆ ! ಗಂಗಾಬಾಯವರ ಮುಖ ತುಂಬ ಮುಗುಳು ನಗೆ ಸೂರೆ.

# ವರದಕ್ಷಿಣೆ ನಿರ್ಮೂಲನ

### ಅರ್ಥಾತ್

# ಮೂರ್ತಿಮಂತ ಸ್ವಾರ್ಥತ್ಯಾಗ

( ಗಂಡಿನ ತಂದೆ ಗಾಂಭೀರ್ಯದಿಂದ ಲೋಡಿಗೆ ಆತುಗೊಂಡು ಕುಳಿತಿದ್ದಾನೆ. ಸ್ವಾರ್ಥತ್ಯಾಗವನ್ನು ಕುರಿತು ಉಪನ್ಯಾಸವನ್ನು ಕೊಡುವ ದೇಶಭಕ್ತನ ಆವಿರ್ಭಾವದಲ್ಲಿ ಗಂಡಿನ ತಂದೆ ಮಾತನ್ನು ಆರಂಭಿಸುವನು )

"ಏನೂ ?.... ವರದಕ್ಷಿಣೆ ....? ಆದರ ಹೆಸರು ತಗೀಬ್ಯಾಡ್ರಿ ! ಕನ್ಯಾಮನಸ್ಸಿಗೆ ಬಂತೂ ಆಗಿ ಹೋತು....! ವರದಕ್ಷಿಣಿ ತೊಗೊಂಬೂ ಹಾಂಗಿಲ್ಲ– ಅಂತ ನಿಶ್ಚಯ ಮಾಡೀನಿ; ಒಮ್ಮೆ ಆಗಿ ಹೋಗಲಿ...." ಮಂದಿ ಏಽನಂತಾರ ಅಲ್ಲಿ....! ನೋಡ್ರಿ ನಮ್ಮಂಥವರು ಒಮ್ಮೆ ಹಾದ್ಯ ತೋರಿಸಿದರೇನಽ ಜನಾ ಬೆನ್ನ ಹತ್ತ್ಯಾರ ! ಇದರ ಹೊರತು ಹೋಗುವದಿಲ್ಲ ಈ ಕೆಟ್ಟ ಚಾಳಿ....!

"ಹುಡುಗನ ಮನಸ್ಸಿಗೆ ಹುಡಿಗಿ ಬಂದಾಳ; ಹುಡಗೀ ಮನಸ್ಸಿಗೆ ಹುಡಗ ಬಂಡಾನೇನಪಾ— ಹೀಂಗಿರುವಾಗ ನಾವು ವರದಕ್ಷಿಣೀ ದಸೀಂದ ಲಗ್ನಾ ಮುರದು ಬಿಟ್ಟರ ಛಂದ ಕಾಣಿಸೀತಽ ?.... ನೀವಽ ಹೇಳ್ರಿ ! ಈಗಿನ ಹುಡುಗೂರಿಗೆ ವಸ್ತ ಬ್ಯಾಡ ಒಡವಿ ಬ್ಯಾಡಾ,.... ಏನೂ ಽ ಬ್ಯಾಡ....! ಅದರಿಂದ ಒಂದು ದೊಡ್ಡ ಖರ್ಚ ಉಳಿತಽದ. ಇನ್ನೇನು ನಿಮುಗ ಛಂದ ಕಾಣಸ್ತಿದ್ದಿಲ್ಲಾಽಂದ್ರ ಒಂದು ನಾಕು ಠಳಕ ಠಳಕ ವಸ್ತ್ರಾ ಇಡಸರಿ ಬೇಕಾದರ....! ನಾವ ಮೊದಲೇ ಜೋಯಿಸೆರೆನ್ರಿಪಾ ! ಈಗೇನೋ ರಾಯರಂತಾರ ಜನಾ ! ನಾಕು ವಸ್ತ್ರಾ ಇಡಿಸಿ ಮದಿವಿ ಮಾಡಿ ಕೊಟ್ಟರ, ಬ್ರಾಹ್ಮಣಗ ಸಾಲಂಕೃತ ಕನ್ಯಾದಾನಾ ಮಾಡಿದ ಪುಣ್ಯಾನೂ ಬರತಽದ.... ಈಗೀನ ಕಾಲದವರಿಗೇನ ವಂಕೀ ಸರಗೀ ಬೇಕಾಗಿಲ್ಲ; ಸರಪಳೀ ಡಾಬು ಬೇಕಾಗಿಲ್ಲ.... ! ಅದರ ಫ್ಯಾಶನ್ನ ಹೋಗಿ ಬಿಟ್ಟಽದ ಈಗ ! ಜೋಡು ಗೋಟು ಪಾಟ್ಲಿ ಎರಡು ತೋಡೆ ಇಷ್ಟ ಇಡಿಸಿದರೂ ಸಾಕು.... ! ಹೆಚ್ಚು ಖರ್ಚಿನ್ಯಾಗ ಬೀಳ

ಬ್ಯಾಡರಿ ನೀವ್ರು....! ನೋಡ್ರಿ ಮಸ್ತಾಂಪರ ಏನಂತೀರಿ.... ಎಷ್ಟು ಮಾಡಿಸಿದರೂ ಕಡಿಮೀನೆ! ಯಾವ ಖರ್ಚಾದರೂ ನಿಮ್ಮ ಲಕ್ಷ್ಯದೊಳಗs ಇರಲಿ.... ತಿಳಿತೇನು ?

“ ವರದಕ್ಷಿಣಿ ಬ್ಯಾಡಾ ಅಂದ್ರೆಲ್ಲ್ಯಾ! ಇನ್ ನೋಡ್ರಿ ನಮ್ಮ ಮನ್ಯಾಗ ಧುಸು ಮುಸು ಸುರು ಆಗಲಿಕ್ಕೇ ಬೇಕು....!— ದೇಸಾಯರು ಎರಡು ಸಾವಿರ ತಗೊಂಡರು, ದೇಶಪಾಂಡೇರು ಮೂರ ಸಾವಿರ ತಗೋಂಡರು. ನಮಗ ಯಾವ ಹಾದೀಲೆ ಹೋಗೂ ಹೊಲ್ಲ ಸುಧ್ಧಾ ಮೂರು ಸಾವಿರ ಕೊಡುತಿದ್ದ... ವರದಕ್ಷಿಣಿ ಇಲ್ಲದ ಮದವೀ ಮಾಡಿಕೊಳ್ಳಲಿಕ್ಕೆ ನಾವೇನು ಅಡಗೀಯವರs ನೀರಿನವರs. ಹಿಂತಾ ಪರಿಯಿಂದ ಈ ಗ್ಯಾಕ ಬೇಕಾಗಿತ್ತು ಮುದಿವಿ ?.... ಇವೆಲ್ಲಾ ಸುರೂ ಆಗ್ತಾವ ನಮಸುತ್ತ! ಜನಾ ಒಳ್ಳೇ ಅನಿಸಿಬಿಡತಾರ. ಕಾಲ ಯಾವದು! ಮಾತು ಯಾವದು ? ಹೆಂಗಸರಿಗೆ ಇದರ ತಿಳವಳಿಕೆ ಎಲ್ಲಿ ಇರತದ ಹೇಳ್ರಿ! ಅದಕ್ಕ ಈಗs ಒಂದ ಕಿವಿಮಾತ್ರ ಹೇಳಿ ಇಟ್ಟಿರತೇನಿ! ಮದವ್ಯಾಗ ಬೀಗಿತ್ತಿ ಕಳಸಗಿತ್ತಿ ಇವರಿಬ್ಬರನ್ನು ಕಾಯ್ದುಕೊಂಡು ಹೋದರ ಆತು! ಚೌಕಲಾಣೀ ಅಂತಾವ; ಎಲ್ಲೆ ಬಳೀ ಇಡ್ಲಬೇಕು—ಅಂತಾವ ಹಾಗಲಕಾಯೀ ಸರಾನs ಬೇಕೂ ಅಂತಾವ. ಇಂಥಾ ಬಡದಾಟ ತಕ್ಕೊಂಡು ಕೂಡತಾವ! ನೀವು ಇದ್ಯಾವದೂ ಬಡದಾಟ ಬಾರದ್ಹಾಂಗ ಮಾಡ್ರಿ ಆತು....!

“ ನನ್ನ ಸ್ವಂತದ್ದು ಯಾವ ತಕರಾರನೂ ಇಲ್ಲ ಏನ್ರೆಪಾ. ನಮ್ಮ ಕರ್ತವ್ಯ ನಾವು ಮಾಡಿಬಿಟ್ಟೇವಿ.... ನಮ್ಮ ತಾಯಿ ತಂದೀ ನಮಗೆಷ್ಟು ಶಿಕ್ಷಣ ಕೊಟ್ಟಿದ್ದರು ಅಷ್ಟು ನಾವು ನಮ್ಮ ಹುಡಗಗ ಕೊಟ್ಟು ಬಿಟ್ಟೇವಿ. ಮ್ಯಾಟ್ರಿಕ ಪಾಸ ಆಗ್ಯಾನ....! ನಮಗೇನೋ ಅಷ್ಟು ಸಾಕು....! ಅಳ್ಯಾ ಬಿ. ಎ. ಆಗಬೇಕೂ ಅಂತ ನಿಮಗ ಅನಸತಿದ್ದರs ಬೇಕಾದರ ಕಲಿಸಿಕೊಳ್ಳಿ; ನಮ್ಮದೇನೂ ತಕರಾರಿಲ್ಲ ಅದಕ್ಕ....! ನಿಮ್ಮ ಅಳ್ಯಾ ನಿಮ್ಮ ಮಗಳು.... ನಾವ್ಯಾಕ ರೆಪಾ ನಡವ ಬರಬೇಕು ? ಹೌದೊ ಅಲ್ಲೊ ಹೇಳ್ರಿ! ಯಾವದs ಮಾತಾಡಿದರೂ ಒಬ್ಬರು ಅಲ್ಲಾ— ಅಂದಿರಬಾರದ್ರೇನ್ರೆಪಾ....!

“ ನಾ ಅಂತೂ ಘಳಾ ಘಳಾ ಹೇಳಿಬಿಟ್ಟೇನಿ; ಮನೀ ಮುಂದ ನಿಮ್ಮ ಮೋಟಾರು ಬಂದು ನಿಂತೂ ಅಂದರ, ಎದ್ದs ಏಳೂದು.... ನೀವು ಕೂಡು

ಅಂದಲ್ಲೆ ಕೂಡತೀವಿ ಏಳು ಅಂದಲ್ಲೆ ಏಳತೀವಿ.... ! ನಾಲ್ಕು ದಿನಾ ಧುರಂಧುರಿಯಿಂದ ಮದವೀ ಮಾಡಿ ನಿರೋಪ ಕೊಟ್ರಿ ಅಂದರ ನಾವೇನು ಒಂದು ಮಿನೀಟು ಕೂಡಾ ನಿಮ್ಮೂರಾಗ ಇರುವರಲ್ಲ.... ; ಹೊರಟುಬಿಡತೀವಿ·ನಮ್ಮ ಊರಿಗೆ. ಹೀಂಗ ಮಾಡದ ಹೊರ್ತು ಗತೀನ ಇಲ್ಲ.... ನಾವೂ ನೀವೂ ಕೂಡಿ ಈ ವರದಕ್ಷಿಣಿ ಚಾಳೀ ನಿರ್ಮೂಲ ಮಾಡಲಿಕ್ಕೇ ಬೇಕು; ನೋಡ್ರಿ, ಇಲ್ಲಿದ್ದರ ನಮ್ಮ ಸಮಾಜಾ ಇಂದಲ್ಲಾ ನಾಳೆ ಹಾಳಾತ್ಯಂತ ತಿಳೀರಿ.... ಯಾಕ? ಖರೇ ಅಂತೀರೊ ಸುಳ್ಳಂತೀರೊ, ನನ್ನ ಮಾತು ? ”

( ಈ ಪ್ರಶ್ನೆಯನ್ನು ಕೇಳಿದೊಡನೆಯೆ ಹೆಣ್ಣಿನ ತಂದೆ ಒಮ್ಮೆಲೆ ಮೂರ್ಛಿತನಾಗಿ ಬೀಳುತ್ತಾನೆ. )

# ಮೂರನೇ ಮದಿವಿ ಮಹಾಸಂಕಟ



( ಮುಂದಿನ ಸಲ ಮದುವೆಯಾಗಲು ಸಿದ್ಧನಾದ ಮುದಿ ಮದುಮಗನೊಬ್ಬನು ತನ್ನ ಜೊತೆಯ ರಾಯರಾಡಿದ ಮಾತಿಗೆ ಉತ್ತರರೂಪವಾಗಿ ಮಾತನಾಡುವನು. )

....ನೀವೀಗೇನ್ ಮಾತಾಡಿದಿರಿ ರಾಯರs ಬರೋಬ್ಬರೀ ನೋಡಿರಿ.... ! ನಾನೂ ನಿಮ್ಮ ಮತದಂವನs ಏನ್ರಿಪಾ ! ಇಷ್ಟು ವಯಸ್ಸಾದ ಮ್ಯಾಲ ಲಗ್ನ ಆಗೂದಂದರ ನಗ್ಗೇಡ ಕೆಲಸs ! ಅದಕ್ಕಂತ- ನಾನೂ—ಹೆಂಡತಿ ಸತ್ತು ಎರಡು ತಿಂಗಳಾಗಿ ಹೋದರೂ ಇನ್ನೂ ಲಗ್ನದ ಮಾತು ತಗದಿದ್ದೇ ಇಲ್ಲ.... ! ನನಗೂ—ದೇವರ ದಯದಿಂದ ಭಂಗಾರದಂಥ ಐದು ಹುಡುಗೋರು ಅವs ! ದೇವರು ಹೊಟ್ಟೀ ಪೂರ್ತೆ ನಾಕು ಕೂರಿಗಿ ಭೂಮಿನೂ ಕೊಟ್ಟಾನ ! ಎಲ್ಲಾ ನೆಟ್ಟಗs ಅದs ಅನ್ರಿ .... ! ಆದರ ನೋಡ್ರಿ, ಹೊರಗಿಂದ ಬಂದು ಮನಿವಳಗ ಕಾಲಿಟ್ಟ ಕೂಡಲೇ ಎದಿ ' ಧಸ್ ' ಅಂತದ !! ಮನಿ ಭಣಾಭಣಾ ಸುರೀತದ ! ಎದ್ದ ಬಡೀಲಿಕ್ಕೆ ಬಂದ್ಹಾಂಗ ಆಗತದ.... ! ಮನಿವೊಳಗ ಯಾರಾದರೂ ಬಂದರ ಎದ್ದು ಒಂದು ತಂಬಿಗಿ ನೀರು ಕೊಡಲಿಕ್ಕೆ ಸುದ್ಧಾ ಯಾರೂ ಇಲ್ಲದ್ಹಾಂಗ ಆತಲಾ ಅಂತ ಅನಸತದ.... !

" ಹುಡುಗೂರಾಗೆ ದೊಡ್ಡವ್ರ ಆಗ್ಯಾವ ಅಂತೀರೇನು ! ಹಾಂಗೂ ಇಲ್ಲ.... ಕಚೇರಿಂದ ಬರೂದರೊಳಗs ಒಂದು ಮಣಕಾಲ ಒಡಕೊಂಡಿರತದ; ಒಂದು ತಲೀಗೇ ಪೆಟ್ಟು ಹಚ್ಚಿಕೊಂಡಿರತದ.... ನೋಡ್ರಿ ಮನೀಗೆ ಬರೂದರೊಳಗ ಸರ್ಯೊಮುರ್ಯೊ ನಡದಿರತದ ಹಾಂಗ, ದಿನಾ ! ಪಾಪ ಅಕ್ಕ ಮುದಿಕಿ; ಆಕಿ ಕಡಿಂದ, ಈ ಹುಡಗರನ್ನ ಸಂಭಾಳಸೂದು ಆಗೂದಿಲ್ಲ. ಈ ಹುಡಗೋರಕಿಂತಾ ಆಕೀ ತಾಪs ನನಗ ಹೆಚ್ಚಾಗೇದ. ಈ ಹುಡಗೂರ ತಾಪಕ್ಕಾಗಿ ಬ್ಯಾಸತ್ತು ತಮ್ಮ ಊರಿಗ್ಹೋಗತೀನಂತ ದಿನಕ್ಕೊಮ್ಮೆ ಹೊಂಟ ನಿಂದರತಾಳ !

ಪರದೇಶಿ ಹುಡಗೋರು, ಬಿಟ್ಟು ಹೋಗಬ್ಯಾಡ....' ಅಂತ ಮತ್ತ ಆಕಿ ಕೈಕಾಲು ಹಿಡಕೊಂಡು, ಸಮಾಧಾನ ಮಾಡಿ ಇರಿಸಿಕೊಳ್ಳೊ ಪ್ರಸಂಗ ಬರ-ತದ ನನಗ! ಮತ್ತ ನಮ್ಮ ಅಕ್ಕನ ಬಾಯಂದ್ರ ನಿಮಗ ಗೊತ್ತಿಲ್ಲೇನು! ಒಮ್ಮೆ ಸುರು ಮಾಡಿದಳಂದರ ಮುಗಸೂ ಮಾತ, ಇಲ್ಲ!

"ನಮ್ಮಕ್ಕ ಏನಂತಾಳ ಗೊತ್ತದ ಏನು? 'ಅಲ್ಲಪಾ, ಮದಿವಿ ಬಿಡಲಿಕ್ಕೆ ನೀಯೇನು ಮುದಕ ತದಕ್ಕ... ಒಳ್ಳೇ ನನಕಿಂತ ಮೂರು ವರ್ಷಕ್ಕ' ಸಣ್ಣಾವಾ! ಐವತ್ತು ವರ್ಷಕ್ಕ ಯಾರು ಲಗ್ನಾನ ಮಾಡಿಕೊಳ್ಳೂದಿಲ್ಲ? ದೊಡ್ಡ ಕಾಕಾ ಅವರ ನಾಕನೇ ಮದಿವಿ ಐವತ್ತುಮೂರು ವರ್ಷಕ್ಕ ಆಗಿತ್ತು. ಮುಂದ ನಾಕು ಮಕ್ಕಳನ್ನ ಹಡೆದು ಕಕ್ಕೀನ ವೈಂದಲು ತೀರಿಕೊಂಡರು. ಈಗಂತೂ ಹೆಣ್ಣು ಬೇಕಾದಷ್ಟು ದೊಡ್ಡೂವ ಸಿಗತಾವ... ಆಗಿನ್ಹಾಂಗೇನು ಎಂಟು ಹತ್ತು ವರ್ಷದ ಕನ್ಯಾ ಇರತಾವ? ಈಗ ನಿ ಮದಿವೀ ಮಾಡಿ ಕೊಳ್ಳಲಿಕ್ಕೆ ತಯಾರಾಗು ಹೆಣ್ಣಿಗೇನು ಕಡಿಮಿ! ವರದಕ್ಷಿಣೀ ಕೊಟ್ಟು ಹೆಣ್ಣು ಕೊಡತಾರ ಬೇಕ್ಾದವರು—! ನಾ ಮುದುಕಿ ದುಡದು ದುಡದು ಸಾಯಬೇಕಂತೀನಿ... ಅದೇನಿಲ್ಲ... ನೀ ಲಗ್ನಾ ಮಾಡಿಕೊಂಡರ ಇಲ್ಲಿ ಇರ-ತೀನಿ; ಇಲ್ಲದಿದ್ದರ ನಾ ಹೋಗತೀನಿ!' ಅಂತ ನೋಟೀಸ ಕೊಟ್ಹಾಂಗ ಮಾಡ್ಯಾಳ ಅಕ್ಕ.

"ನನಗೂ ಪಂಚೇತೀ ಬಿದ್ದದ ಏನ್ರೆಪಾ! ಲಗ್ನ ಬ್ಯಾಡ ಬ್ಯಾಡಾ-ಅಂತ ನಿಶ್ಚಯ ಮಾಡಿದ್ದೆ; ಆದರ ಅಕ್ಕನ ಕಿರಿ ಕಿರೀ— ತಾಳಲಾರದಷ್ಟು—ಆಗೇದ. ವರದಕ್ಷಿಣೀ ಅಂತೂ ತಗೊಳ್ಳೊ ಹಾಂಗಿಲ್ಲಾ ಅಗ ಅಕ್ಕಗ ಹೇಳಿ-ಬಿಟ್ಟೇನಿ! ಯಾರಾದಾವರೂ ಬಡವರದು ಹೆಣ್ಣು ಮಾಡಿಕೊಂಡರ ಅವರಿಗೂ ಒಂದು ರೀತಿಂದ ಸಹಾಯ ಮಾಡಿದ್ಹಾಂಗ ಆಗತದ; ಅಕ್ಕನ ಕಿಟಿ ಕಿಟೀನೂ ತಪ್ಪತದ; ಹುಡಗೂರ ತಾಪಾದರೂ ಕಡಿಮಿ ಆದೀತು, ಅಂತ ಆಶಾ! ಮುಂದ ದೇವರು ಏನ ಮಾಡಸತಾನ ನೋಡಬೇಕು! ವಯಸ್ಸೂ ಹೆಚ್ಚೂ ಕಡಿಮೆ ಆಗ್ತಾವ ಈ ಮಾತೇನೋ ಖರೆ ಅನ್ರಿ! ದೊಡ್ಡ ಕನ್ಯಾನ ನೋಡಿ ಮಾಡಿಕೊಬೇಕು! ಆದರ, ನಮ್ಮ ಎರಡನೇ ಕುಟುಂಬ ಮುತ್ತೈದಿ ತನ ದಿಂದನ ತೀರಿಕೊಳ್ಳಲಿಲ್ಲೇನು? ಅವೆಲ್ಲಾ ದೇವರ ಕೈಯಾಗಿನ ಮಾತೇ

ಪ್ರಪಾ; ನಾವು ಎಷ್ಟರವರು? ಹರೀ! ನಮ್ಮಪ್ಪಾ, ಎಲ್ಲಾ ನಿನ್ನ ಇಚ್ಛಾ! ಹೌದಲ್ಲೋ ರಾಯರು ಸಿವಾ ಹೇಳ್ರಿ!

(ರಾಯರ ಬಾಯಿ ಒಣಗಿ ಹೋಗಿದ್ದಿತು. ನಾಲಗೆಯೆ ಏಳದಂತಾಗಿದ್ದಿತು. ಮದುವಣಿಗನನ್ನು ಬರೀ ಗುರುಗುಟ್ಟಿ ನೋಡತೊಡಗಿದ್ದರು.)

# ·ಧಾರವಾಡದ ಅಶ್ವರತ್ನ

### ಅರ್ಥಾತ್

# ಟಾಂಗಾದ ಕುದರಿ

(ಸೆಟ್ಟರಿಗೆ ಧಾರವಾಡದಿಂದ ಹುಬ್ಬಳ್ಳಿಗೆ ಹೋಗಬೇಕಾಗಿತ್ತು. ತುಂಬ ಗಡಬಡಿಯ ಕೆಲಸ ಅವರಿಗೆ. ಉಗೆ ಬಂಡಿ ಬಿಡುವದಕ್ಕೆ ಸ್ವಲ್ಪವೇ ಅವಕಾಶ ಉಳಿದಿತ್ತು. ಬಾಡಿಗೆಗೆ ಒಂದು ಟಾಂಗಾ ಗೊತ್ತು ಮಾಡಿ ಸೆಟ್ಟರು ಅದರಲ್ಲಿ ಕುಳಿತರು. ಬೇಗ ಬೇಗ ಟಾಂಗಾ ಹೊಡೆಯೆಂದು ಅಡಿಗಡಿಗೆ ಅವಸರ ಪಡಿಸಲು ತೊಡಗಿದರು. ಟಾಂಗಾದವನು ಹಾಗೆ ಮಾಡದಿದ್ದುದರಿಂದ, ಸೆಟ್ಟರು ಕುದುರೆಗೇ ದೋಷಕೊಡಲಾರಂಭಿಸಿದರು. ಸೆಟ್ಟರ ಮಾತುಗಳನ್ನು ಕೇಳಿ ಟಾಂಗಾದವನು ಹೆಮ್ಮೆಯ ನುಡಿಗಳಲ್ಲಿ ಹೇಳಲಾರಂಭಿಸಿದ)

ಟಾಂಗಾದವ: ಏನು ಸೆಟ್ಟರs ! ಹೆಂತಾ ಕುದುರಿಗೆ ಏನು ಹೆಸರ ಇಡತದೀರಿ....? ಇದು ಜತ್ತಿ ಪಂಡ್ರಾಪೂರ್ ಕಡೇದು ಕುದರಿ ಐತಿ !....ನಾ ನೋಡ್ರಿ....ಟಾಂಗಾ ಮಾಡಿ ಮೂವತ್ತು ವರ್ಸ ಅದೂ. ಅದರ ಮೂವತ್ತ ವರ್ಸದಾಗ, ಒಂದೂ ಹಿಂತಾ ಕುದರೀನs ನೋಡಿಲ್ಲ....ಭಾಳ ಅಂವರ ಭಾಳ ಹುಶಾರಿ ! ಹಿಂತಾ ಕುದರಿ ಲಕ್ಷದಾಗ ಒಂದು ಎಲ್ಯಾರೆ ಹುಟ್ಟತ್ರತ್ರೈತಿ !

ಸೆಟ್ಟರು:—ಟಾಂಗಾ ನಿಂದರಿಸಿದ್ಯಾಕೊ ? ಹೊಡಿಯಲಾ ಲಗೂನs !

ಟಾಂಗಾದವ:—ಇಲ್ರೀ....ಕುದರಿ ಲದ್ದೀಹಾಕಲಾಕ ನಿಂತೈತಿ........? ಬಾಕಿ ಕುದರಿ ಹಾಂಗೆಲ್ಲಾ ಓಡೂಮುಂದ ಲದ್ದೀಹಾಕೂವದಿಲ್ಲ ಈ ಕುದರಿ....! ಓಣಿಗುಂಟs ಲದ್ದೀ ಹಾಕಲಾಕ ಇದೇನು ಕ್ವಾಣ ಏನ್ರಿ ಸೆಟ್ಟರ ?

ವಿ. ಸೂ. ಟಾಂಗಾದವನ ಭಾಷೆ ಉರ್ದು ಮಿಶ್ರಿತ ಕನ್ನಡವಿತ್ತು. ಆದರೆ ಸಂಪಾದಕರ ಮತ್ತು ವಾಚಕರ ಸೌಕರ್ಯಕ್ಕಾಗಿ ಅದನ್ನು ಕನ್ನಡದಲ್ಲಿಯೇ ಕೊಟ್ಟಿರುತ್ತದೆ.

ನೆಟ್ಟೂರು:—ಕುಂಟತಕದ್ದೇನೋ ಸಾಬಾ ನಿನ್ನ ಕುದರಿ ?

ಟಾಂಗಾದವ:—ಹೌದರಿ....ಜರಾಽನಽ ಕುಂಟತೈತಿ ! ನೀವು ಒಳೇ ಹುಡಿಕಿ ಹಿಡದ್ರಿ ನೋಡ್ರಿ ಇದರ ಕೂಂಟೂದನ್ನ ! ಇಲ್ಲದಿರಕ, ಇದು ಬೆರಕೀ ಹೆಣ್ಣಜಾತಿ; ಟಾಂಗಾ ಫಾಸ ಆಗೂಮುಂದ ಒಳ್ಳೀ ಪ್ರೋಲೀಸ ಸಾಬನ ಕಣ್ಣೀಗೇ ಇಂಗ ಹಚ್ಚಿತು ನೋಡ್ರಿ !.. ಎರಡ ಹೆಜ್ಜೀ ಕುಂಟತೈತೋ ಇಲ್ಲೋ ...ಮುಂದ ನಡಗೀ ನಡದ್ಹಾಂಗ ಮಾಡತೈತಿ ! ಪ್ರೋಲೀಸಸಾಬ ಬಿಟ್ಟು ಅವನ ಕಾಕಾ ಬಂದರೂ ತಿಳಿಯೂ ಹಾಂಗಿಲ್ಲ ...! ಹಿಂಗಾಲ ಎಡ ಗಾಲು ಕುಂಟ ಇದ್ದದ್ದು ನನಗಽ ಗೊತ್ತು. ಅದಕ್ಕಽ ಗೊತ್ತು ! ಬಲ್ ಬೆರಕಿ ಅಂದರ ಬಲ್ ಬೆರಕಿ....! ಕಾಲ ಕಟ್ಟಿ ಮೆಯ್ಯಲಾಕ ಬಿಟ್ಟಾಗ, ಹುಡಗೂರ ಕರದರ ಹತೀಲಿ ಬರತೈತಿ....ಅದಽ ನನ್ನ ನೋಡಿದರ ಓಡೂದಽ ಮಾಡತೈತಿ ! ಹಿಂತಾ ಜೆಂಡ್ಲ ಜಾತೀದು ಐತಿ ...! ಹೊಡಲಿಕ್ಕೆ ಹತ್ತಿದಾಗ ಹೊಸಪಾಗಂತೂ ಹುಡೂತಲೇನಽ ನೆಲಕ್ಕಽ ಕುಂಡ್ರೂದು ಮಾಡತಿತ್ತು....! ಕುಂತೈತೀ ಅಂತ ಬಿಚ್ಚಿ ಬಿಡೂತಲೇನಽ ಎದ್ದು ಓಡೇ ಓಡೂದು ! ಹಿಂತಾ ಕುದರೀನಽ ಸಿಗಾಕಿಲ್ಲ....! ನಾನೂ ಏನ ಹಾಂಗಽ ಬಿಡಲಿಲ್ಲ. ನಾಡಾಗಿಲ್ಲದ ಬೆರಕಿ ! ಇದಕ್ಕ ಒಂದ ಬೇತಾ ಮಾಡಿದೆ; ನಮ್ಮ ಅಂಗಳದಾಗೆ ಮಳೀ ನೀರು ನಿಂತಿದ್ದೂ: ಅಲ್ಲೆ ಟಾಂಗಾ ಹೂಡಿದೆ ಕುದರೀ ಹೊಟ್ಟೆಗೆ ಒಂದೆರಡು ಒಳ್ಳೀ ಸುಣ್ಣದ ಹಳ್ಳು ಕಟ್ಟಿದ್ದೆ. ಕುದರಿ ಕೂಂಡ್ರೂದಷ್ಟಽ ತಡಾನೋಡ್ರಿ, ಸುಣ್ಣದ ಹಳ್ಳು ನೀರಾಗ ತೊಯ್ಸು ಕುದೀಲಾಕ ಹತ್ತಿದ್ದೂ; ಕುದರಿ ಜಿಗಿತು ಎದ್ದು ನಿಂತ್ತು. ಅಂದಽ ಕಡೀದಿನಾ ನೋಡ್ರಿ. ಅಂದಿನಿಂದಽ ಕುಂಡ್ರೂದಽ ಬಿಟ್ಟು ಬಿಟ್ಟಿತು !

“ ನೀವೆಲ್ಲಾ ಕತ್ತಿ ಓಡಿಸ ಅಂದೀ; ಕುದರಿ ಹ್ಯಾಂಗ ಓಡೀತು ಹೇಳ್ರಿ ! ಮೊನ್ನೆ ಕಾಮನ ಕಟ್ಟ್ಯಾಗ ನನ್ನ ಟಾಂಗಾದ ಎದುರಿಗಿಂದನಽ ನಬೀಸಾಬನ ಟಾಂಗಾ ಭರದಾಂಡ್ ಜೋರಲೇ ಬರುತ್ತಿತ್ತು.... ; ತರಬ್ ತರಬ್ ಅನ್ನೂ ದರಾಗಽ ಓಣೀ ಒಳಗ ಆಡೂ ಹುಡುಗನ ಕಾಲಮ್ಯಾಗಽ ಗಾಲಿ ಹಾಯ್ದು ಹೋತು....! ಅದನ್ನ ನೋಡಿದಾಗಿನಿಂದಽ ನಮ್ಮ ಕುದರಿ ಓಡೂದನ್ನಽ ಬಿಟ್ಟುಬಿಟ್ಟೈತಿ....! ಮುದಿಕಿ ಆಗೈತಿ, ಹಾಂಗ್ ಐತಿ ಹಿಂಗ್ ಐತಿ.... ಅಂತ ಪೊಜದಾರಸಾಬ ಬಯ್ಯಲಾಕ ಸುರೂ ಮಾಡಿದ್ದ—ಪಾಸ್ ಮಾಡೂ ಮುಂದ!

ಆಗ ನಾ ಒಂದಽ ಮಾತ ಹೇಳಿದೆ; ರಾವಸಾಬ್ ನನ್ನ ಕುದರಿಗೀಗ ಹದಿನೆಂಟ ವರಸ ಆಗಿಡಾವ್....; ಇದು ಕುದುರೀ ಇರೂಽದಽ ಹದಿನೆಂಟು ವರ್ಷದ ಹುಡಿಗಿ ಇತ್ತಂದರ ನಿಮಗ ಪಾಸ್ ಬೀಳುತ್ತಿತ್ತು....! ಪಾಪ, ಕುದರಿ ಮಾತ್ರ ನಾಪಾಸ್ ಯಾಕ?.... ನೋಡ್ರಿ ಸೆಟ್ಟರಽ ನಾ ಖರೇ ಹೇಳಿದರೂ ಕೇಳತೀರಿ ಸುಳ್ಳ ಹೇಳಿದರೂ ಕೇಳತೀರಿ.... ಹಿಂಗಽ ಅಂದು ಬಿಟ್ಟೆ. ನನ್ನ ಮಾತಿಗೆ ಪ್ರೊಜಡಾರ್‌ಸಾಬ ನಗಲಾಕ ಹತ್ತಿದ.... ಟಾಂಗಾ ಫಾಸ್ ಅಂದ....! ಹಿಂಗ್ ಐತಿ ಸೆಟ್ಟರ ಕುದರೀ ಮೋಜು! ಸುಮ್ಮನಽ ಇಲ್ಲ ಈ ಹುಡಿಗಿ....! ಇಬ್ಬರ ಫಾಸ್ ಐತಿ ನೋಡ್ರಿ ಈ ಟಾಂಗಾಕ....; ಅಪ್ಪಿ ತಪ್ಪಿ ಮೂರ ಮಂದಿ ಕುಂತರೂ ಪೋಲಿಸಗ ತಿಳೀಲಾಕಿಲ್ಲ; ಇದಕ್ಕೆ ತಿಳಿದು ಬಿಡತೈತಿ....! ಮೂರು ಮಂದಿ ಕುಂತರ ಮುಂದಕ್ಕ ಹೆಜ್ಜೀನಽ ಇಡೂದಿಲ್ಲ....! ಕುದರೀ ಶಾಣೇತನದಿಂದನಽ ನನ್ನ ಮ್ಯಾಲೆ ಇನ್ನೂ ಯಾವ ಪೋಲಿಸನೂ ಒಮ್ಮ್ಯಾ ಕಟ್ಲೀನಽ ಹಾಕಿಲ್ಲ....! ಇಂಥಾದ ಐತಿ ನನ್ನ ಮಗಳು ಇದು!

“ನೋಡ್ರಿ ಟೇಸನ್ ಬಂತು ನೋಡ್ರಿ....! ಎಲೀ ಇವನ....! ಗಾಡೀ ಹೊಂಟೈತ್ಯಲಾ! ಅದಽ ಅಂತೀನಿ. ಈ ಗಾಡಿ ಹೋದರ ಹುಬ್ಬಳ್ಳಿಗೆ ಹೋಗಲಾಕ— ಇನ್ನೊಂದ್ ಅರ್ಧಾತಾಸಿನೊಳಗಽ— ಇನ್ನೊಂದು ಗಾಡೀ ಐತೀ ಅಂತ ಗೊತ್ತು ನನ್ನ ಕುದರಿಗೆ....! ಸೆಟ್ಟರಽ ಸಾಮಾನು ಇಳಿಸಿಕೊಂಡರ್ಯಾ? (ಬಾಡಿಗೆ ತಕ್ಕೊಂಡ ಮೇಲೆ) ಸಲಾಂ ಸಾಬ್ ಸಲಾಂ ಸಾಬ್, ಚಲ್ ಬೇಟಿ ಚಲ್!”

(ಗಾಡಿ ತಪ್ಪಿದುದರಿಂದ ಸೆಟ್ಟರಿಗೆ ಸಾವಕಾಶವಾಗಿ ವಿಚಾರ ಮಾಡಲು ಅವಕಾಶ ದೊರೆಯಿತು. ಇಂಥಾ ಬುದ್ಧಿವಂತ ಕುದುರಿಯನ್ನು ಸಾಕಿದ್ದ ಟಾಂಗಾದವನಿಗೆ ಸೆಟ್ಟರು ಅನೇಕಾನೇಕ ಧನ್ಯವಾದಗಳನ್ನೂ ಕೊಟ್ಟರು. ಕಲಿಯುಗದಲ್ಲಿ ಯಾರಾದರೂ ಅಶ್ವಮೇಧ ಮಾಡಿದರೆ, ಇದೇ ಕುದುರೆಯನ್ನು ಅವರು ಒಯ್ದರೆ ಒಳ್ಳೆಯದೆಂದು ಮನಸ್ಸಿನಲ್ಲಿಯೇ ಅಂದುಕೊಂಡರು.)

# ಕಲಿಯುಗಾ ಬಂತು



(ಪೇನಶನ್ ಪಡೆದ ಮಾಮಲೇದಾರ ಕಚೇರಿಯ – ಕಾರಕೂನರು ರಾಯರ ಕೂಡ ಮಾತನಾಡುತ್ತ ಮನೆಯಲ್ಲಿ ಕುಳಿತಿದ್ದಾರೆ. ಕಾರಕೂನರಾಯರಿಗೆ ತಿರಸ್ಕಾರ ಕ್ರೋಧ ಹೆಮ್ಮೆಗಳ ಮೂಲಕ ಆವೇಶ ತುಂಬಿದಂತಾಗಿದೆ. ಹಾವ ಭಾವದೊಂದಿಗೆ ಜೊತೆಯಲ್ಲಿ ಕುಳಿತಿದ್ದ ರಾಯರಿಗೆ ಕೂಗಿ ಕೂಗಿ ಹೇಳುತ್ತಲಿದ್ದಾರೆ.)

ನಾ ಏನ್ ಹೇಳಿದೆ ನಿಮಗ....! ಈ ಲಂಪ.... ಮಕ್ಕಳಿಗೆ ಮಡೀ ಇಲ್ಲಾ.... ಮೈಲಿಗಿ ಇಲ್ಲಾ! ದಶಮೀ ಕಟಿಗೊಂಡು ಫಿರತೀಮ್ಯಾಲೆ ಹೋಗೂ ಮಾಮಲೇದಾರನ್ನ ಎಂದರೆ ನೋಡಿದ್ದೀರಾ? ಏನ್ ಹೇಳ್ರಿ....!

ಈಗಿನ್ನೂ ಎಲ್ಲಾ ದಶಮಿ ಕಟಿಗೊಂಡು ಹೋಗತಾವಂತ....; ದುಡ್ಡಿನ ಹಾಲು ದುಡ್ಡಿನ ಮೊಸರು ತರಿಸಿ ಚ್ಯಾವಡಿ ಕಟ್ಟೀಮ್ಯಾಲೆ ದಶಮೀ ಗಂಟು ಬಿಚ್ಚಿ, ತಿಂದು ಬರತಾವಂತ.... ವಾಲೀಕಾರರ ಹಾಂಗ! ಇವರು ಮಾಮಲೇದಾರರs ಇವರು....!

"ಹೋಗಬೇಕು ಹೋದರ ಫಿರತೀಮ್ಯಾಲೆ.... ನಮ್ಮ ಗೋವಿಂದ ರಾಯರಗೂಡಾ! ಅವರ ಮಡೀ ಏನೂ, ಮೈಲಿಗಿ ಏನೂ, ಎಲ್ಲಾ—ವಿಲಕ್ಷಣ ನೋಡ್ರಿ! ನರಸಿಂಹ ಸಾಲಿಗ್ರಾಮ ಇರತಿತ್ತು.... ಅವರ ಪೆಟ್ಟಿಗ್ಯಾಗ; ನಿತ್ಯ ಅದರ ಅಭಿಷೇಕ ಆಗದ ಹೊರತು ಊಟಾನೆ ಇಲ್ಲಾ! ನಾಕು ಸೇರು ಹಾಲು ಬೇಕಾಗತಿದ್ದೂ. ಅಭಿಷೇಕಕ್ಕ! ಇಷ್ಟ ಹಾಲು ಹ್ಯಾಂಗ ಸಿಗತಿದ್ದೂವರಿ....? ಹಳ್ಳಿ ಗೌಡ ಕುಲಕರ್ಣ್ಯಾರ ತಾಯಿ ಏನ ಹಡೆದ್ದು ಹಾಲು ಇಲ್ಲಾ ಅಂತ ಹೇಳಲಿಕ್ಕೆ!"

"ನಿಮಗೊಂದು ಮೋಜು ಹೇಳತೀವಿ ರಾಯರs! ಒಮ್ಮೆ ಚೈತ್ರ ಮಾಸ, ತಿಮ್ಮಾಪೂರದಾಗ ಮುಕ್ಕಾಂ ಇತ್ತು! ರಣಾ ರಣಾ ಬ್ಯಾಸಗಿ;

ಬಿಸಲಾಗ ತಿರಿಗಿ ತಿರಿಗಿ ಬ್ಯಾಸತ್ತು ಹೋಗಿತ್ತು ಕಚೇರಿ....! ಒಂದು ದಿನಾ ಶ್ರೀಖಂಡ ಅರೇ ತಿಂದರ ಥಣ್ಣಗಽ ಅನಿಸೀತೂ ಅಂತಾ ವಿಚಾರ ಬಂತು. ಸಸೀಕಲೇ ಎದ್ದವರೇ ಮಸರಗಡಗೀ ತರಿಸಲಿಕ್ಕೆ ಹೇಳಿದಿವಿ ಗ್ರಾಮಸ್ಥರಿಗೆ! ಐದಾರು ಮಸರಗಡಗೀ ತಂದರು....! ನೋಡತೀವ್ರಿ- ಮಸರಿನವಸ್ಯಾಲ ಕಸೀನೇ ಇಲ್ಲಾ! ಇಂಥಾ ಲುಚ್ಚಾ ಆಗೇದ ಜನಾ! ಒಂದರ ಬೆನ್ನ ಹಿಂದ ಒಂದರಂತೇ ಯಾವ ಗಡಗೀ ನೋಡಿದರೂ ಅದೇ ಹಣೇಬಾರ! ನಮ್ಮ ಸಿರಸ್ತಾರರ ಸಿಟ್ ಏನ್ ಕೇಳತೀರಿ ... ಗಡಗೀ ತೊಗೊಂಡು ಬಿಸಾಟಿ ಬಿಟ್ಟರ, ಕುದರೀ ಕಾಲಾಗ ಹೋಗಿ ಬಿತ್ತು ಗಡಗಿ! ಧರ್ಮಸಾಲಿ ಮುಂದೆಲ್ಲ ಗೋಪಾಳ ಕಾವಲಿ ಆದ್ಹಾಂಗ ಆಯ್ತು! ಮತ್ತೇನದ...! ಗೌಡಾ ಕುಲಕರ್ಣಿ ಬಂದರು....; ನಮೋ ನಮೋ ಅಂಸಿ ಬಿಟ್ಟೆ ಅವರ ಕಡಿಂದ! ಮುಂದೇನ್ ಕೇಳತೀರಿ, ಆ ಮುಕಾಮಿನೊಳಗ ಇರೂ ತನಕ ಒಂದು ದಿನಾ ಶ್ರೀಖಂಡ.... ಒಂದು ದಿನಾ ಬಾಸುಂದೀ....! ಅಮಲಂದರ ಹೀಂಗ ಕೂಡಿಸಬೇಕಾಗತದಽ ರಾಯರ! ಇಂಥಾ ಕೆಲಸ ದುಡ್ಡಿನ ಹಾಲು ಮಸರು ತೊಗೊಳ್ಳುವರ ಕಡಿಂದ ಆಗತದಽ ಎಲ್ಲ್ರಿ?

“ಅಲ್ರಿ ... ಇವರ ನಶೀಬಕ್ಕ ಅಡಗೀಯವರು ಸಿಗಬಾರದಽ? ತಾಲೂಕಿಗೆ ದೀಡನೂರ ಹಳ್ಳಿ; ಒಬ್ಬಿಲ್ಲಾ ಒಬ್ಬ ಕುಲಕರ್ಣೇರು ನೇಮಣೂಕಿ ಕೆಲಸ ಇದ್ದೇ ಇರತದ! ಊರಿದ್ದಲ್ಲೆ ಹೊಲಗೇರಿ ಅಂತ, ಎಲ್ಲಾಕಡೆ ಅಪಾವತೀನೂ ಇದ್ದೇ ಇರತಾವ! ಯಾರದಾವರೂ ಒಂದು ಅರ್ಜಿ ತಗೊಂಡು ಚೌಕಶೀಗೆ ಹಾಕ್ಕೊಳ್ಳತ ನಡದರಾತ್ರಿಪಾ....? ಕುಲಕರ್ಣಿ ಕ್ಯಾಂಪಿನ ಬೆನ್ನು ಹತ್ತಿ ಹತ್ತತಾನ...! ಅಲ್ಲಿಂದೇನು ಅಡಗೀ ಆಗತದ—ನೀರು ಆಗತದ-ಎಲ್ಲಾ ಆಗತದ! ನಮ್ಮ ರಾವಸಾಹೇಬರ ಕಡೆ ಇದ್ದನಲ್ಲಾ ನಾರಾಯಣಪ್ಪ! ಅವನದೊಂದು ಮೋಜಿನ ಕತೀನ. ಆತ; ಬಾಯೀಯವರ ಕೈತೆಳಗಿದ್ದು ಅಡಗೀ ಕಲಿತ ನಾರಾಯಣಪ್ಪ ‘ಇನ್ನೇನು ಕುಲಕರ್ಣಿಕಿ ಬ್ಯಾಡ, ಅಡಗೀನ ಮಾಡಿಕೊಂಡಿರೂದು ನೆಟ್ಟಗ! ಅಂದ. ಈಗ ನೋಡ್ರಿ ನಾನೂರು—ಐನೂರು ಜನರ ಪ್ರಸ್ತದ ಅಡಿಗಿ ಅಂದರೂನೂ ಹೊಡಸು ಚೆಲ್ಲತಾನ ನಾರಾಯಣಪ್ಪ!

“ಇದೆಲ್ಲಾ ಅಮಲ್ದಾರರ ಕರ್ತಬಗಾರೀ ಮಾತು ಅದ ಏನ್ರೆಪಾ! ಇವೇನ್ರಿ ಗಳಗಳಾ ಗಳಗಳಾ ಅಳತಾವ! ಸ್ನಾನ ಇಲ್ಲದ್ದಕ್ಕನ, ಮೂರು ಮೂರು

ದಿವಸ ತಂಗಳ ದಶೀಮೀ ತಿಂತಾಸ! ಅದಕ್ಕs ಕಲಿಯುಗಾ ಬಂತೂ ಅಂದೆ! ಏನು ಮಾಡೂದದ,! ಆ ಕಾಲ ಹೋತು ಆ ಮಾತ ಹೋತು! ನಡೀಂ ಪುರಾಣದ ಹೊತ್ತಾತು.... ಆಚಾರ್ರು ಬಂದಿದ್ದಾರು!"

( ಕಾರಕೂನರ ಮಾತನ್ನ ಕೇಳಿದ ರಾಯರ 'ಈ ಕಲಿಯುಗವಲ್ಲಿ ಜೀವಿಸಿರುವದೇ ಜೇಡ!' ಎಂದು ಪ್ರತಿಜ್ಞೆ ಮಾಡುತ್ತಲೇ ಪುರಾಣಕ್ಕೆ ಹೊರಟರು. )

# ‘ಮತಸಂಪಾದನೆಗೆ ರಾಮಬಾಣ ಉಪಾಯ’



ಬರ್ರಿ, ಬರ್ರಿ, ಗೋಪಾಳರಾವ ನಮ್ಮನ್ನಗ್ದಿ ಮರೆತ್ರಂತ ತಿಳಕೊಂಡಿದ್ವಿವಿ. ಬರ್ರಿ ಇಲ್ಲೆ ಕೂಡಬರ್ರಿ. ಅಕಡೆ ಕೂಡಬಾಡ್ರಿ ನಿಮ್ಮ ಕೂಡುವ ಸ್ಥಾನ ಈ ಗಾದಿಯ ಮೇಲೆ ಅದೆ ನಿಮ್ಮನ್ನ ತೆಳಗ ಕೂಡ್ರಿಸಿ ನಾವೆಲ್ಲ ಕೂಡ್ರಬೇಕು. ಗಾದಿಯ ಮ್ಯಾಲೆ ಕೂಡ್ರಿ ರಾಯರೆ

ಎಲಾ, ಅಲ್ಲಿ ಯಾರಿದ್ದೀರಿ ಎರಡು ಕಪ್ಪು ಉತ್ತಮ ಚಹಾ ಮಾಡಂತ ಹೇಳ್ರಿ. ಗೋಪಾಳರಾಯರಿಗೆ ಸ್ಟ್ರಾಂಗ ಚಹಾ ಬೇಕು ಗೊತ್ತದ ಇಲ್ಲೊ. ತಾಜಾ ಹಾಲು ಹಾಕಲಿಕ್ಕೆ ಹೇಳು.

ಇದ್ನೋಡ್ರಿ ಆನಂದರಾವ, ಗೋಪಾಳಾರಾವ ಅಂದ್ರ ಒಂದು ವ್ಯಕ್ತಿ ಅದ. ವ್ಯಕ್ತಿ. ಒಬ್ಬ ಮನುಷ್ಯ ತಮ್ಮನ ಅಂತ ಅಂದ್ರ ಜೀವ ಹೋದರು ಅವನ ಕೈ ಬಿಡುವದಿಲ್ಲ. ಬಹಳ ದಿವಸದಾಗ ಅವರ ಭೆಟ್ಟಿಯಾಗಿದ್ದಿಲ್ಲ ಎಂದು ತಿಳಿದು ನಿನ್ನೆ ಅವರ ಮನಿಗೆ ಹೋಗಿದ್ದೆ. ಗೋಪಾಳರಾಯರು ಮನೆ-ಯಾಗದ್ದಿಲ್ಲಂತ ಅವರ ಮನ್ಯಾಗ ಹೇಳಿಬಂದೆ. ಇಂದು ಬೆಳಗಾಗುವದರೊಳಗೆ ಗೋಪಾಳಾರಾವ ಇಲ್ಲಿ ಹಜರರಿದ್ದಾರ. ಋಣಾನಬಂಧ? ಅಂದ್ರ ಹೀಂಗ ಇರ ಬೇಕು. ನಮ್ಮದು ಅವರದು ಗೆಳತನ ಅಂತ ಅಂದ್ರ ನಮ್ಮ ಪೂರ್ತೆಕ್ತ ಇಲ್ಲ ಅದು. ವಂಶಪರಂಪರಾಗಿದ್ದು ಅದು, ಅವರ ತಂದಿ ನಮ್ಮ ತಂದಿ ಮನೂಗಳಿ ಯೊಳಗ ಸಾಲಿ ಕಲಿಯುವ ಮುಂದೆ, ಇಬ್ಬರೂ ಕೂಡಿ ಸಾಲಿ ತಪ್ಪಿಸಿ ಗಿಡ ಮಂಗ್ಯಾನ ಆಟಾ ಆಡಲಿಕ್ಕೆ ಹೋಗುತ್ತಿದ್ದರು. ಅಂದಿನಿಂದ ಅವರದು ನಮ್ಮದು ಗೆಳೆತನ.

ಯಾಕ್ರೀ ಗೋಪಾಳರಾವ, ಆಗಿನ ಗಿಡಮಂಗ್ಯಾನ ಆಟದ ದಿವಸ ಹೋದವು. ಈಗಿನ ಹುಡುಗರು ಖೋಡಿಗಳು ಕಿರಿಕೆಟ, ಹಾಕಿ, ಅಂತಾವ

ಮಡ್ಡಿನ ಹೊರ್ತು ಕೆಲಸಿಲ್ಲ. ನಮ್ಮ ಆಟಗಳಿಗೆ ಒಂದು ದುಡ್ಡು ಸಹ ಖರ್ಚು ಹತ್ತುದಿಲ್ಲ.

ಎಲಾ, ಚಹ ಆಗಿದ್ದರ ತರ್ರ್ಯೋ ಸಂಗಡ ಎನರೆ ಖಾರ ತೊಗೊಂಬರ್ರ್ಯೋ ಆದರ ಹೊರ್ತಾಗಿ ಚಹಕ್ಕ ರುಚಿನೇ ಬರುವದಿಲ್ಲ. ಗೋಪಾಳ್ರಾವ ಅಂದರ ಚಹದ ಪಕ್ಕಾ ಸವಿಗಾರರು, ಹಳದೀ ಡಬ್ಬಿಯ ಹೊರ್ತು ಗೊತ್ತಿಲ್ಲ ಅವರಿಗೆ.

ನಾನು ಮ್ಯುನಸಿಪಾಲ್ಟಿಯ ಚುನಾವಣೆಗೆ ನಿಂತದ್ದು ಅವರಿಗೆ ಹೇಳ-ಲಿಕ್ಕೆ ಬೇಡ, ನನ್ನ ಚುನಾವಣೆ ಅಂದ್ರ ಅವರ ಚುನಾವಣೆ ಇದ್ದ್ಹಂಗ. ಗೋಪಾಳ್ರಾಯರಷ್ಟು ಆತ್ಮೀಯ ಭಾವನೆಯಿಂದ ಕೆಲಸ ಮಾಡಪವರೆಂದರೆ ಕ್ವಚಿತ್ ಸಿಗುವರು. ಎಲಾ. ಎಲಿ ಅಡಕಿ ಡಬ್ಬಿ ತಗೊಳ್ಳಿರೋ, ವಿಳೇದೆಲಿ ಕೂಡಿಗಿವು ಅವ ಕೂಡಗಿವು, ಇನ್ನೇನು ಹೇಳಬೇಕ ನಿಮಗ, ಎಲ್ಲ ನೆನಪಿನಲ್ಲಿರಿಲ್ಲಿರಲಿ, ಅಂದ್ರ ಆತು ೨೫ ನೇ ತಾರೀಖು ಮಾತ್ರ ನೆನಪಿನಲ್ಲಿರಿಲಿ.

ಸ್ನಾನದ ವಾಳ್ಯಾ ಆದಂತೆ ತೋರತದ. ವಿನಾಕಾರಣ ನಿಮ್ಮ ಆನ್ಹೀ ಕಕ್ಕ ಯಾಕ ಹರಕತ್ತು ಮಾಡಬೇಕು ಹೋಗಿಬರ್ರಿ. ನಮಸ್ಕಾರ( ಹೊರಗೆ ಬಂದ ಮೇಲೆ ಗೋಪಾಳರಾಯರ ) ೬ ತಿಂಗಳಿಗೊಮ್ಮೆ ಮ್ಯುನಸಿಪಾಲ್ಟಿಯ ಚುನಾವಣೆ ಇದ್ದರೆ ಎಷ್ಟು ಮಜಾ ಆಗುತ್ತಿತ್ತು ಎಂದರು !



# ಆಧುನಿಕ ಅಜವಿಲಾಪ



ಹೌದ್ರೆಪಾ; ಜನರಿಗೆ ಸಮಾಧಾನ ಹೇಳುವದು ಸಸಾರ ಇರತದ. ಇದೇ ಪ್ರಸಂಗ ನಿಮ್ಮ ಮೇಲೆ ಬಂದಿದ್ದರ ನಿಮ್ಮ ಬಾಯಿಗೆ ಇಂಥ ಬೋಧಾಮೃತದ ಶೆಲಿ ಬೀಳ್ತಿದ್ದಿಲ್ಲ. ಅಂತ "ಈ ಜಗತ್ತಿನಲ್ಲಿ ಯಾರೂ ಚಿರಂಜೀವಿಯಲ್ಲ. ಎಲ್ಲಾರಿಗೂ ಇಂದಿಲ್ಲ ನಾಳೆ ಸಾವಿದ್ದದ್ದೇ. ಇಂದು ನಿಮ್ಮ ಹೆಂಡತಿ ತೀರ-ಕೊಂಡ್ಲು. ನಾಳೇ ನೀವು ಹೋಗುವವರು ವಿನಾಕಾರಣ ದುಃಖ ಮಾಡಿ ಉಪಯೋಗವೇನು ? "

ವಾವಾ ಹೀಗೆ ಸಮಾಧಾನ ಹೇಳಲಿಕ್ಕೆ ನನಗೂ ಬರತಿತ್ತು. ನಿಮ್ಮ ಮ್ಯಾಲೆ ಈ ಪ್ರಸಂಗ ಬಂದಿದ್ರ ಆ ಬೋಧದಿಂದ ನಿಮ್ಮ ಸಮಾಧಾನ ಆಗ ತಿತ್ತೇನು ? ಇದೇ ನನ್ನ ಪ್ರಶ್ನೆ.

ಲಗ್ನ ಆದಮ್ಯಾಲೆ ಎಂಟು ಹತ್ತು ವರ್ಷಗಳಲ್ಲಿಯೇ ಆಕಿ ತೀರಿಕೊಂಡಿದ್ದರೆ ಇಷ್ಟು ಕೆಟ್ಟು ಅನಿಸ್ತಿದ್ದಿಲ್ಲ. ಈಗ ಲಗ್ನ ಆಗಿ ನಲವತ್ತು ವರ್ಷಾಯ್ತು, ಒಂದು ರೀತಿಯಿಂದ ಆಕಿ ಚಟ ಬಿದ್ಧಾಂಗೇ ಆಗಿತ್ತು. ಮೊನ್ನೆ ಮೊನ್ನೆ ಹತ್ತಿದ ನಾಸೀ ಪುಡೀ ಚೀಟಿ ಬಿಟ್ಟೇನಂದರ ಬಿಡವಲ್ಲು. ಇದು ನಲವತ್ತು ವರ್ಷದ ಚಟ. ಬಿಡಬೇಕು ಹ್ಯಾಂಗ, ನನಗಂತೂ ಬೆಳಿಗ್ಗೆದ್ದ ಕೂಡಲೆ ಮಾರೀಮ್ಯಾಲ ಕೈಯಾಡಿಸಬೇಕು ಮತ್ತು ಆ ಕೈಗೆ ಮೂಗುಹತ್ತಬಾರದು ಹೀಗೆ ಸ್ಥಿತಿ ಯಾಗೇದ. ಇನ್ನು ಅವಳ ಜಾಗಾ ತುಂಬೂ ಬಗೀ ಹ್ಯಾಂಗ, ಏನೇ ಇರ್ಲಿ ಈಗ ಸಿಟ್ಟಿಗೆದ್ದರ ಬೈಬೇಕು ಯಾರ್ನ ಇದರದು ಸಹಿತ ಪಂಚೇತಿ ಬಂದದ.

ಅಡಗೀ ವಿಚಾರ ಮಾಡಿದ್ರ ನೋಡ್ರಿ ಖಾರ, ಹುಳಿ, ಉಪ್ಪು ಪದಾರ್ಥ ಹ್ಯಾಂಗಾದ್ಧಂಗ ನುಂಗಬೇಕು ಸುಮ್ಮನೆ. ಸ್ವಲ್ಪ ಇಳೀಸ್ವರದಲ್ಲಿ ತಪ್ಪು ತಗೀ ಲಿಕ್ಕೆ ಹೋದರ ಅಡಿಗಿಯವಳು ಸಿಟ್ಟಿಗೆದ್ದು ದುಮು ದುಮು ಉರಿಯಹತ್ತು

ವಳು. ಮತ್ತ ಅಡಿಗೀಯವಳ್ನ ತಗಪು ಯಾವನಾದರೂ ಗಂಡಾಳು ಅಡಿಗೆಯವನ್ನ ಇಡಬೇಕಾದ್ರ ಅಡಿಗೀ ಮನೀ ಒಳಗ ಕಾಲಿಡಬೇಕಾದ್ರ ಮನಸ್ಸು ಹಿಂಜರಿತದ. ಒಲೀ ಹತ್ರ ಸುಟ್ಟ ಬೀಡಿಯರೇ ಕಾಣಸ್ತದ ಅಥವಾ ಮುಂದು ಬಗ್ಗಿ ಉರಿಯುವ ಒಲಿಯೊಳಗ ತಂಬಾಕದ ಜೀಕಳಿ ಹೊಡೆಯುವ ಬಲ್ಲವಾಚಾರ್ಯರೇ ಕಾಣಸ್ತಾರ ಅವಗ ಸಿಟ್ಟು ಮಾಡ್ತೀನು ನನಗಿಂತ ಮೊದಲೇ ಅವನು ನೋಟೀಸ ಕೊಟ್ಟು ಸ್ವತಂತ್ರ ಆಗತಾನ. ಆದರ ಇವಳ ವಿಷಯದಲ್ಲಿ ನೋಟೀಸಿನ ಅಂಜಿಕೆ ಯಾವಾಗಲೂ ಇದ್ದಿದ್ದಿಲ್ಲ ಎಷ್ಟೇ ಸಿಟ್ಟು ಮಾಡಿ ಕಾಲು ಅಪ್ಪಳಿಸುತ್ತಾ ನಾವು ಹೊರಬಿದ್ರ ನನ್ನ ಬದಲಿ ಮನೆಯಲ್ಲಿಯ ಹುಡುಗರ್ನ ಮಾತ್ರ ನಾಲ್ಕು ಪೆಟ್ಟು ಬಡಕೋತಿದ್ಲು ಮತ್ತೆ ನಾನು ಸಾಯಂಕಾಲ ತಿರುಗಿ ಬರುವ ಕಾಲಕ್ಕೆ ನನಗೆ ಸೇರುವ ಖಾರಸಜ್ಜಿಗಿ ಮಾಡಿಟ್ಟಿರತಿದ್ಲು. ಹೇಳಿದರ ಈಗ ಸಹ ಯಾವಾದರೂ ಖಾರ ಸಜ್ಜಿಗಿ ಮಾಡ್ತಾರು ಆದರೆ ಹೊಟ್ಟೆಯೊಳಗಿನ ಎಲ್ಲಾ ಸಿಟ್ಟ ನುಂಗಿ ನಗೆಮೋರಿಯಿಂದ ಸಜ್ಜಿಗೀ ತಿನ್ನಲಿಕ್ಕೆ ಕರೆಯುವರ್‍ಯಾರು ?

ಖರೇ ಹೇಳ್ತೀನಿ ನಗಬ್ಯಾಡ್ರಿ ಕದಾಚಿತ್ ನಿಮಗೆ ಖೊಟ್ಟಿ ಅನಿಸೀತು? ಆದರ ನಿಜವಾಗಿ ಇಕೀಯಿಂದ ನನ್ನ ತಾಯಿಯದು ಸಹ ವಿಸ್ಮರಣೆಯಾಗಿತ್ತು ನಾನು ಮನೆಯೊಳಗೆ ಇದ್ದೇನೆಂದರೆ ಕೇವಲ ಕಾಲೇಜದೊಳಗಿನ ಒಬ್ಬ ಚೈನೀಬಾಜೀ ವಿದ್ಯಾರ್ಥಿಯಂತೆಯೇ ಇದ್ದೆ. ಸಂತಿ ಇಲ್ಲ ಪ್ಯಾಟಿ ಇಲ್ಲ. ಏನ್ ತರೂದಿಲ್ಲ ಬರೂದಿಲ್ಲ. ಎಲ್ಲಾ ವ್ಯವಸ್ಥೆ ಆಯಾ ವ್ಯಾಳ್ಯಾಕ್ಕ ಬರೋಬರಿ ಆಗತ್ತಿತ್ತು. ನನಗೇನೂ ನೋಡಬೇಕಾಗ್ತಿದ್ದಿಲ್ಲ. ಈಗ ಪರಿಸ್ಥಿತಿ ಅದರ ಉಪರಾಟಿಯಾಗೇದ ಜಳಿಗ್ಗಿದ್ದು ನೀರು ಕಾಸಲಿಕೆ ಹಂಡೇದ ಒಲಿಗೆ ಉರಿ ಹಚ್ಚುವದರಿಂದ ಹಾಲಿಗೆ ಹೆಪ್ಪು ಹಾಕ್ಯಾರೋ ಇಲ್ಲೋ ಈ ವರೆಗೆ ಎಲ್ಲ ಕೆಲಸಗಳನ್ನು ನಾನೇ ಮಾಡಬೇಕು. ಅಥವಾ ಆಗ್ಯಾವೋ ಇಲ್ಲೊ ನೋಡಬೇಕು. ಇದಕ್ಕಾ ಹೆಚ್ಚು ತ್ರಾಸಿನ ಸಂಸಾರ ಹುಡುಕಿದರ ಸಿಗಲಿಕ್ಕಿಲ್ಲ.

ಮನೆಯೊಳಗಿನ ಆಳುಗಳು ಸುದ್ದ ಇದೇ ಹಾಡು. ಇಕೀ ಇರುವ ವರೆಗೆ ಭಾಂಡೀ ತಿಕ್ಕುವ ಹೆಣ್ಮಗಳಿಂದ ಆಗಸರ ವರೆಗೆ ಎಲ್ಲರ ಕೆಲಸಗಳು ಚನ್ನಾಗಿ ಆಗ್ತಿದ್ದವು. ಈಗ ಈ ಮಕ್ಕಳಿಗೆ ಏನಾಗೇದೋ ಯಾರಿಗೊತ್ತು ?

ಭಾಂಡೇ ತಿಕ್ಕಾಕಿರೆ ಬಂದ್ರ ಕ್ಕೆ ಕೆಳಗಿನ ಆಳು ಬರುವದಿಲ್ಲ. ಇವರಿಬ್ಬರೂ ಬಂದ್ರ ಎಮ್ಮೀ ಕಾಯುವವ ಬರುವದಿಲ್ಲ. ಇವರ ಮರಜೀ ಹಿಡಿದು ಜೀವ ಓಲ್ಯಾ-ಗೇದ. ನಮ್ಮ ಸಂಸಾರ ಮೋಟರದ ನಾಲ್ಕೂ ಘಾಲಿ ದುರುಸ್ತ ಅದ ಎಂದು ಹೇಳಲಿಕ್ಕೆ ಬರೂದಿಲ್ಲ. ಕನಿಷ್ಟಪಕ್ಷಕ್ಕ ಒಂದು ಘಾಲಿಯಾದರೂ ಘಾಳಿ ಹೋಗಿರತದ. ಈ ಬೇಜಾರಕ್ಕ ಬೇಸತ್ತು ಒಮ್ಮೊಮ್ಮೆ ಅತ್ಯಂತ ಭಯಂಕರ ವಿಚಾರಗಳು ಮನಸಿನಲ್ಲಿ ಬರುವವು- ಎಲ್ಲ್ಯಾದರೂ ಒಂದು ಘೋಡ್ದ ಕಡವಂಡೀ ಮ್ಯಾಲಿಂದ ಹಾರಕೊಂಡು ಜೀವ ಕೊಡಬೇಕು ಅಥವಾ ಹಿಂದು ಮುಂದೆ ನೋಡದೆ ಭರದಿಂದ ಎರಡನೇ ಲಗ್ನಾ ಮಾಡಿಕೊಂಡು ಬಿಡಬೇಕು. ಹೀಗನಸ್ತದ- ಆದರ ಈ ಪಯಸ್ಸಿನಲ್ಲಿ ಲಗ್ನಾ ಮಾಡಿಕೊಂಡರ ಒಂದು ಪಂಚೀತಿ. ಬಿಟ್ಟರ ಪಂಚೀತಿ. ಈ ಪೇಚಿನಲ್ಲಿ ಬಿದ್ದಿರುವೆನು. ಈ ಹೊಸ ಕುಟುಂಬದ ಚಟ ಬೀಳುವರ ಒಳಗಾಗಿ ಹೇಮಗರ್ಭ ಮಾತ್ರೆ ಅಗತ್ಯ ಬಿದ್ದಿರುತ್ತದೆ, ಏನು ಮಾಡ್ಲೀಂ! ಈಗ! ನನ್ನ ಅರ್ಧಾಂಗಿ ತೀರಿಕೊಂಡಿಲ್ಲ ಆದರೆ ಈಗ ನನಗೆ ಅರ್ಧಾಂಗವಾಯುವೇ ಆಗೇದ. ಇಂಥ ಸಮಯದಲ್ಲಿ ಅಳದೇ ಏನು ? ಶಂಖವಾದ್ಯ ಮಾಡಲ್ಯಾ ? ನೀವೇ ಹೇಳ್ರಿ. ”

# ಭಾಗ ೨

# ವಿಡಂಬನಾತ್ಮಕ ಬರೆಹಗಳು

ಈ ದೀರ್ಘ ಬರೆಹಗಳಲ್ಲಿ, ಆಯಾಕಾಲದ ಸಮಾಜ ಮನೋವೃತ್ತಿಯನ್ನು ಚಿತ್ರಿಸಲಾಗಿದೆ. ಐತಿಹಾಸಿಕ ಹಿನ್ನೆಲೆಯಿಂದ ಇವುಗಳ ಕಡೆಗೆ ನೋಡಬೇಕು- ಜಾತೀಯ ದೃಷ್ಟಿಯಿಂದಲ್ಲ. ಎಲ್ಲ ಸಮಾಜಗಳಲ್ಲಿಯೂ ಈ ಮನೋವೃತ್ತಿಯನ್ನು ಕಾಣಬಹುದು.

೧. ಮಳ್ಳರ ಗೌಡನ ಮೃತ್ಯುಪತ್ರ

೨. ವಿಧುರ ಮಂಡಲದ ಆವಶ್ಯಕತೆ

೩. ಅಪ್ಪಾಸಾಹೇಬರ ಭಾಷಣ
(ಮಹಾರಾಷ್ಟ್ರ ಸಾಹಿತ್ಯ ಸಮ್ಮೇಲನ ಬೆಳಗಾಂವ)

# ಮುಷ್ಲರ ಗೌಡನ ಮೃತ್ಯುಪತ್ರ

*

೧

## ಬಿರುದಿನ ಬರಗಾಲ

ಮಹಾರಾಜ ರಾ|| ರಾ|| ಸಂಪಾದಕ ಕರ್ನಾಟಕ ವೈಭವ ಇವರಿಗೆ-ಕೃತಾನೇಕ ಶರಣ ಶರಣಾರ್ಥಿ ವಿನಂತಿ ವಿಶೇಷ. ವಿಜಾಪೂರ ಜಿಲ್ಹೆಯೊಳಗಿನ ಜನರ ಸುಖದುಃಖಗಳನ್ನೆಲ್ಲ ಸರಕಾರದ ಮುಂದೆ ಮಂಡಿಸಿ ಮತ್ತು ಅವುಗಳನ್ನು ವಾದ ಮಾಡಿಸಿ ಕೊಡಬೇಕೆಂದು ತಾವು ಕಂಕಣಬದ್ಧರಾಗಿರುವಿರೆಂದು ತಿಳಕೊಂಡು ನಿಮ್ಮ ಕಡೆಗೆ ಈ ಪತ್ರವನ್ನು ಲೋಕಮಾನ್ಯವಾದ ತಮ್ಮ ಪತ್ರದಲ್ಲಿ ಪ್ರಸಿದ್ಧಿಸುವಿರೆಂದು ಆಶೆಗೊಂಡು ಕಳಿಸಿರುವೆನು.

ಯೇಸುಕ್ರಿಸ್ತನ ಪ್ರತಿಯೊಂದು ವರ್ಷದ ಆರಂಭಕ್ಕೆ ಅಂದರೆ ಜಾನೇವಾರಿಯ ಒಂದನೇ ತಾರೀಖಿಗೆ ನಮ್ಮ ದಯಾಳು ತಾಯಿತಂದೆ ಸರಕಾರವು ನಮ್ಮಲ್ಲಿಯ ಎಷ್ಟೋ ಪ್ರಮುಖ ಜನರಿಗೆ ಪದವಿದಾನಗಳನ್ನು ಮಾಡುವದು. ಆ ಪ್ರಕಾರ ಈ ವರ್ಷವೂ ಕೂಡ ಹಿಂದುಸ್ಥಾನದಲ್ಲಿಯ ಸಾವಿರಗಟ್ಲೆ ಜನರಿಗೆ ಪದವಿಗಳು ದೊರೆತಿರುವವು. ಇದರಿಂದ ನನಗೆ ಎಷ್ಟೋ ಆನಂದವು. ಆದರೆ ಈ ಸಾವಿರಾರು ಪದವಿಗಳಲ್ಲಿ ಒಂದಾದರೂ ಕೂಡ ನಮ್ಮ ವಿಜಾ-ಪೂರ ಜಿಲ್ಹೆಯ ಪಾಲಿಗೆ ದೊರೆಯಲಿಲ್ಲೆಂದು ನನಗೆ ಬಹಳ ಖೇದವೆನಿಸುತ್ತದೆ. ವಿಜಾಪೂರ ಜಿಲ್ಹೆಯಲ್ಲಿ ನಾಲ್ಕೈದು ವರ್ಷ ಒಂದೇ ಸವನೇ ಬರವು ಬಿದ್ದರೇನಾಯಿತು ? ವಿಜಾಪೂರ ಜಿಲ್ಹೆಯು ನಿರ್ಜನವಾಯಿತೋ ಹೇಗೆ ?

ಒಂಬತ್ತು ಲಕ್ಷ ಎಪ್ಪತ್ತು ಸಾವಿರ ಜನಸಂಖ್ಯೆಯಲ್ಲಿ ಸಾವಿರಾರು ಜನರು ಮುಳಸೀಪೇಠೆ, ಮುಂಬಯಿ ಮೈಸೂರ ಮತ್ತು ಆಸಾಮುಗಳಲ್ಲಿ ಕೂಲಿಯ ದೆಶೆಯಿಂದ ಹೋದರೂ ಕೂಡ ಸಣ್ಣ ರಾವಸಾಹೇಬ ಪದವಿಗೆ ಯೋಗ್ಯವಿದ್ದವನು ವಿಜಾಪೂರ ಜಿಲ್ಹೆಯಲ್ಲಿ ಉಳಿದಿಲ್ಲವೇನು ?

ಮುಂಬಯಿ ಇಲಾಖೆಯಲ್ಲಿಯ ಪ್ರತಿಯೊಂದು ಜಿಲ್ಹೆಗೆ ಒಬ್ಬಿಬ್ಬರು ರಾವಸಾಹೇಬರು ಆಗೇ ಆಗಿರುವರು. ಆದರೆ ವಿಜಾಪೂರ ಜಿಲ್ಹೆಯೊಂದೇ ಅಂಥದೇನು ಪಾತಕ ಮಾಡಿರುವದು? ಈ ಜಿಲ್ಹೆಯಲ್ಲಿ ತಮ್ಮ ಮನೆಯ ಕೆಲಸಕ್ಕಿಂತ ಸರಕಾರೀ ಕೆಲಸವನ್ನು ಅತ್ಯಂತ ದಕ್ಷತೆಯಿಂದ ಮಾಡಿದಂಥ ಸರಕಾರೀ ವಕೀಲರಿರುವರು; ಅವರಂತೆ ಮುನಸಿಪಾಲಟಿ ಮತ್ತು ಲೋಕಲ ಬೋರ್ಡಗಳ ಹಿಂದಿನ ಮತ್ತು ಈಗಿನ ಅಧ್ಯಕ್ಷರಿರುವರು; ಸರಕಾರದ ದೊಡ್ಡ ದೊಡ್ಡ ಕಂತ್ರಾಟದ ಕೆಲಸಗಳನ್ನು ಹಿಡಿಯುವಂಥ ಕಂತ್ರಾಟದಾರರಿರುವರು; ಮತ್ತು ಪೆನ್ಶನ್ ತಕ್ಕೊಂಡಮೇಲಾದರೂ ಕೂಡ ಒಣ ಪಗಾರಿಯಿಂದ ಸರಕಾರದ ಕೆಲಸಗಳನ್ನು ಮಾಡಲಿಕ್ಕೆ ಯಾವಾಗಲೂ ಟೊಂಕ ಕಟ್ಟಿ ನಿಂತಂಥ ಮತ್ತು ವಾರ್ಧಕ್ಯದಿಂದ ಬಾಗಿದಂಥ ಅನುಭವದಿಂದ ಮುದುಕರಾದಂಥ ಎಷ್ಟೋ ಪೆನ್ಶನರ ಜನರು ಇಲ್ಲಿ ವಾಸ ಮಾಡಿರುವರು. ಹತ್ತು ವರ್ಷಗಳ ವರೆಗೆ ಒಂದೂ ದಿವಸ ಕೂಡ ತಪ್ಪದೆ ಏಕನಿಷ್ಠೆಯಿಂದ ಕೆಲಸ ಮಾಡಿದಂಥ ಬೆಂಚ ಮ್ಯಾಜಿಸ್ಟ್ರೇಟರಿರುವರು; ಅದರಂತೆ ಪ್ರತಿಯೊಂದು ವರ್ಷಕ್ಕೆ ಸರಕಾರದ ಬೊಕ್ಕಸಿಗೆ ಸಾವಿರಾರು ರೂಪಾಯಿಗಳನ್ನು ಭರಣ ಮಾಡುವಂಥ ಶಿಂದಿಯ ಮಕ್ತೇದಾರರಿರುವರು; ವಿಜಾಪೂರ ಜಿಲ್ಹೆಯಲ್ಲಿ ದುಷ್ಕಾಳವಿದ್ದರೂ ಸಹಿತ ಬಡರೈತರ ಹೊಟ್ಟೆಯ ಮೇಲೆ ಕಾಲ ಕೊಟ್ಟು ಅವರ ಮಾನಮರ್ಯಾದೆಯನ್ನು ಬದಿಗೊತ್ತಿ ಜುಲುಮೆಯಿಂದ ಕರವನ್ನು ವಸೂಲ ಮಾಡುವಂಥ ಬಹಾದ್ದೂರ ಮಾಮಲೇದಾರರಿರುವರು ಕೇವಲ ವರಿಷ್ಠ ಅಮಲದಾರರಿಗೆ ನರಬರಾಯಿಗಳನ್ನು ಮಾಡುವವರಲ್ಲಿಯೇ ನಿಷ್ಣಾತರಿದ್ದಂಥ ಪೋಲೀಸ ಅಮಲದಾರರು ಕೂಡ ಇರುವರು. ಎಷ್ಟೋ ಸಹಕಾರಿಸಂಘಗಳ ಅಧ್ಯಕ್ಷರೂ ಕೂಡ ಇರುವರು. ಮತ್ತು ಹೊತ್ತೊತ್ತಿಗೆ ಏನಾದರೊಂದು ಮಾತಾಡಿ ಜಾತಿದ್ವೇಷಗಳನ್ನು ಬೆಳಿಸುವಂಥ ದೊಡ್ಡ ದೊಡ್ಡ ಭಾಷಣಕಾರರಾದವರೂ ಇರುವರು. ಈ ಎಲ್ಲ ಜನಗಳಲ್ಲಿ ಒಬ್ಬನೂ ಕೂಡ ಸರಕಾರದ ಮನಸ್ಸಿಗೆ ಬರಲಿಲ್ಲೆಂದರೆ ಬಹಳ ಆಶ್ಚರ್ಯಕಾರಕವಾದ ಸಂಗತಿಯು ವಿಜಾಪೂರದ ಪೇಟೆ ಸಣ್ಣ ಪುಟ್ಟದಲ್ಲ. ದೊಡ್ಡ ದೊಡ್ಡ ಪರದೇಶಿ ಅರಿವೆಗಳ ಅಂಗಡಿಗಳ ಮಾಲಕರಿಂದಲೂ, ಕಿರಾಣಿ ವ್ಯಾಪಾರಸ್ಥರಿಂದಲೂ, ಅಪತಿ ಜನರಿಂದಲೂ, ಮನೆಮನೆಗೆ ೫-೬ ಗಾಣಗಳಿದ್ದಂಥ ಗಾಣಿಗರಿಂದಲೂ, ಹತ್ತು

ಪೌಂಡದ ವರೆಗೆ ಚಹಾವನ್ನು ಮಾರುವ ಚಹಾದ ಅಂಗಡಿಗಳಿಂದಲೂ ಮತ್ತು ೧೦೦೦೦ ಬೀಡಿಗಳನ್ನು ಮಾರುವಂಥ ಬೀಡಿ ಅಂಗಡಿಕಾರರಿಂದಲೂ ಮತ್ತು ಇಂಥ ಎಷ್ಟೋ ತರದ ಜನರಿಂದಲೂ ಕೂಡಿ ಈ ವಿಜಾಪೂರ ಪೇಟೆಗೆ ಶೋಭೆಯುಂಟಾಗಿರುವದು. ಆದರೆ ಇವುಗಳಲ್ಲಿ ಒಬ್ಬನಾದರೂ ಗೃಹಸ್ಥನು ಸರಕಾರದ ಕಣ್ಣಿಗೆ ಬೀಳಲಿಲ್ಲೆಂಬದು ನಮ್ಮ ದುರ್ದೈವವಲ್ಲವೋ? ಪುಣೆ, ಮುಂಬಯಿಗಳಲ್ಲಿಯ ಸೇವಾಸದನದಲ್ಲಿದ್ದ ಸ್ತ್ರೀಯರಿಗೂ ಕೂಡ ಪದವಿಗಳು ದೊರೆತಿರುವವು. ಆದರೆ ವಿಜಾಪೂರದಲ್ಲಿಯ ಉದ್ದುದ್ದ ಮೀಸೆಯನ್ನು ಹೊತ್ತಂಥ ಮತ್ತು ಬಣ್ಣದ ಗಡ್ಡಗಳನ್ನು ಶೋಭೆಗೆಂದು ಬೆಳಸಿದಂಥ ಪುರುಷರಿಗೆ ಒಂದಾದರೂ ಪದವಿಯು ದೊರೆಯಬಾರದೆಂದರೆ ಇದಕ್ಕಿಂತ ನಾಚಿಕೆಗೇಡಿತನವು ಎರಡನೆಯದು ಯಾವದು ? ಸತ್ಯವಾಗಿ ಹೇಳುವವಾದರೆ ಈ ವರ್ಷ ಒಂದಾದರೂ ಪದವಿಯು ಸಿಗುವದೆಂದು ನನಗೆ ಬಹಳ ಆಶೆಯಿತ್ತು. ಜಾನೇವಾರಿ ೨ನೇ ತಾರೀಖಿನ ವರ್ತಮಾನ ಪತ್ರವನ್ನು ನೋಡಲಿಕ್ಕೆ ನಾನು ಬಹಳೇ ಆತುರನಾಗಿದ್ದೆನು. ವರ್ತಮಾನ ಪತ್ರವು ಕೈಯಲ್ಲಿ ಬಂದ ಕೂಡಲೇ ಮ್ಯಾಟ್ರಿಕ ಪರೀಕ್ಷೆಗೆ ಕುಳಿತ ವಿದ್ಯಾರ್ಥಿಯಂತೆ ನಾನು ಪದವಿಯನ್ನು ಓದಲಿಕ್ಕೆ ಸುರು ಮಾಡಿದೆನು. ಯಾದಿಯು ಮ್ಯಾಟ್ರೀಕ ಪರೀಕ್ಷೆಯ ಪರಿಣಾಮದಷ್ಟೇ ದೊಡ್ಡದಿದ್ದರೂ ಕೂಡ, ಅದರಲ್ಲಿ ನನ್ನ ಹೆಸರು ದೊರೆಯಲಿಲ್ಲ. ಆ ದಿವಸ ನಾನು ಅಷ್ಟೇನು ನಿರಾಶೆಯಾಗಲಿಲ್ಲ. ಯಾಕಂದರೆ ಒಂದು ವೇಳೆ ನನ್ನ ಹೆಸರು ಪುರವಣಿಯ ಯಾದಿಯಲ್ಲಿಯಾದರೂ ಬರಬಹುದೆಂದು ನನಗೆ ಅನಿಸಿತ್ತು. ಆದರೆ ಮೂರು ನಾಲ್ಕು ದಿವಸಗಳಾದರೂ ಕೂಡ ಪುರವಣಿಯ ಯಾದಿಯು ಬರಲಿಲ್ಲವೆಂದು ತಿಳಕೊಂಡು ವೈ|| ಗವ್ಹರ್ನರ ಸಾಹೇಬರ ಕಡೆಗೆ ಒಂದು ತಂತಿಯನ್ನು ಕಳುಹಿಸಿಕೊಟ್ಟೆನು. ಅದರ ಉತ್ತರ ಶೀಘ್ರವಾಗಿ ಬರಬೇಕೆಂಬುವದರ ದೆಸೆಯಿಂದ ೧|| ರೂಪಾಯನ್ನಾದರೂ ನಾನೇ ತುಂಬಿದೆನು. ಆ ತಂತಿಗೆ ಅವರ ಉತ್ತರವು ಬಂದದ್ದೇನಂದರೆ “ ನೀವು ಯಾರು ಇದ್ದೀರೆಂದು ನಮಗೇನೂ ಗೊತ್ತಿಲ್ಲ ಇದರ ದೆಸೆಯಿಂದ ನನಗೆ ಬಹಳ ಖೇದವೆನಿಸುತ್ತದೆ ” ಈ ತಂತಿಯನ್ನು ಓದಿದ ಕೂಡಲೇ ನನ್ನ ಸಿಟ್ಟು ನೆತ್ತಿಗೇರಿ ಸಹಿಸಲಾರದೆ ಈ ಇತಿವೃತ್ತವನ್ನು ಬರೆಯಲು ಅರ್ಹನಾದೆನು. ಒಂದು ಪದವಿಯನ್ನಾದರೂ ದೊರಕಿಸುವ ಸಲುವಾಗಿ ನನ್ನ ಯೋಗ್ಯತೆಯು ಎಷ್ಟು

ಅದೆ ಎಂಬದನ್ನು ಮುಂದಿನ ಪತ್ರದಲ್ಲಿ ಬರೆಯುವೆನು. ನೀವು ಈ ಪತ್ರವನ್ನು ಪ್ರಸಿದ್ಧಿಸಿದರೆ ಸರಕಾರವು ಜನರನ್ನು ಯಾವ ಪ್ರಕಾರ ಮೋಸ ಮಾಡುತ್ತ ದೆಂಬ ಮಾತು ತನ್ನಷ್ಟಕ್ಕೆ ತಾನೇ ಹೊರಬೀಳುವದು.

೨

## ಯೋಗ್ಯತಾ ದಿಗ್ದರ್ಶನ

ಈ ಪತ್ರದಲ್ಲಿ ರಾವಸಾಹೇಬ ಇಲ್ಲವೆ ರಾವಬಹಾದ್ದೂರ ಆಗಲಿಕ್ಕೆ ನನ್ನ ಯೋಗ್ಯತೆಯು ಎಲ್ಲಿಯವರೆಗೆ ಇದೆ ಎಂಬುದನ್ನು ಸ್ವಲ್ಪದರಲ್ಲಿ ದಿಗ್ದರ್ಶನ ಮಾಡಬೇಕೆಂದು ನಾನು ವಿಚಾರಿಸಿರುವೆನು.

ಸ್ವಲ್ಪದರಲ್ಲಿ ಹೇಳುವದೆಂದರೆ ಅದು ನನ್ನ ಆತ್ಮ ಚರಿತ್ರವೇ ಇರುವದು. ದೊಡ್ಡ ದೊಡ್ಡ ಪ್ರಮುಖ ಜನರು ತಮ್ಮ ಆತ್ಮ ಚರಿತ್ರೆಯನ್ನು ಬರೆಯುವರು ಅಂದ ಮೇಲೆ ನಾನು ಸಹಿತ ಯಾಕೆ ಬರೆಯಬಾರದು? ಸರಕಾರೀ ಪದವಿ ಗಳಿಗೆ ನಾನು ಯೋಗ್ಯನಿದ್ದೇನೆಂದು ನಿಮಗೆ ತಿಳಿನಬೇಕಾದರೆ ನನ್ನ ಪೂರ್ವದ ಚರಿತ್ರೆಯನ್ನು ಹೇಳುವದು ಅತ್ಯಂತ ಅವಶ್ಯವಿರುವದು.

ಡೋಗಿಬರದ ನಂತರ ೪-೫ ವರ್ಷಗಳ ಮೇಲೆ ವಿಜಾಪೂರ ಜಿಲ್ಲೆ ಯಲ್ಲಿಯ ಒಂದು ಸಣ್ಣ ಹಳ್ಳಿಯಲ್ಲಿ ನಾನು ಜನಿಸಿದೆನು. ರಾಗೀಬನದಲ್ಲಿ ನನಗೆ ಮೊಗಮೀನೆಗಳು ಒದೆಯುತ್ತಿದ್ದವು. ನಾವು ಪಾಟೀಲ ಮನೆತನದವ ರಿದ್ದರೂ ಕೂಡ ನಮ್ಮ ಕಡೆಗೆ ಗಾಡಿಕೆ ಇದ್ದಿದ್ದಿಲ್ಲ. ನಾವು ಬಿಹಾರ ಪಾಟೀಲರು. ನಾವು ಮನೆಯಲ್ಲಿ ಎರಡು ಎತ್ತುಗಳನ್ನಿಟ್ಟು ಹೇಗಾದರೂ ಮಾಡಿ ಸಂಸಾರದ ಚಕ್ರವನ್ನು ನಾಗಿಸುತ್ತಿದ್ದೆವು. ನಾನು ಸಣ್ಣ ವಯಸ್ಸಿನಲ್ಲಿ ದ್ದಾಗ್ಗೆ ಶಿಕ್ಷಣದ ಪ್ರಸಾರವು ಅಷ್ಟು ಇದ್ದಿದ್ದಿಲ್ಲ. ಅದ್ದರಿಂದ ನಾನು ಕನ್ನಡ ೪ ನೇ ಇಯತ್ತೆಯಲ್ಲಿ ತೇರ್ಗಡೆ ಹೊಂದಿದೆನು. ಇಂಗ್ರೇಜಿ ಸಹಿಯನ್ನು ಈಗ ಇತ್ತಿತ್ತಲಾಗಿ ಕಲಿತಿರುವೆನು.

ನನ್ನ ಹಿರಿಯರು ನಾನು ಸಾಲೆಯನ್ನು ಬಿಟ್ಟ ಕೂಡಲೇ ಒಕ್ಕಲತನದ ಕೆಲಸವನ್ನು ಮಾಡಲಿಕ್ಕೆ ಹೇಳಿದರು. ಆದರೆ ಕೆಲಸವೆಂದರೆ ನನಗೆ ಮೊದಲಿ

ನಿಂದ ಬೇಸರಿಕೆ ಮತ್ತು ನಮ್ಮ ಹಳ್ಳಿಯಲ್ಲಿ ಶಾಲೆಯು ಕೂಡ ಇದ್ದಿದ್ದಿಲ್ಲ, ಈ ಎರಡು ಕಾರಣಗಳ ದೆಶೆಯಿಂದ ನಾನು ಅಲ್ಲಿಯೇ ಒಂದು ಶಾಲೆಯನ್ನು ಸ್ಥಾಪಿಸಿ ಅದರಲ್ಲಿಯೇ ಶಿಕ್ಷಕನಾದೆನು. ಮುಂದೆ ಕೆಲವು ಕಾಲ ಗತಿಸಿದ ನಂತರ ನನ್ನ ಪ್ರಯತ್ನದಿಂದ ವತನದಾರ ಪಾಟೀಲನು ಬರತರ್ಫನಾದನು. ಮತ್ತು ಗೌಡಕಿಯ ಕೆಲಸದ ಮೇಲೆ ಸರಕಾರದ ಪತಿಯಿಂದ ನನ್ನ ನೇಮಣೂಕ ವಾಯಿತು. ನಾನು ಗೌಡಿಕೆಯ ಕೆಲಸವನ್ನು ಮಾಡುವ ಕಾಲಕ್ಕೆ ನಮ್ಮ ತಾಲೂಕದಲ್ಲಿಯ ಫೌಜದಾರ ಮತ್ತು ಮಾಮಲೇದಾರ ಇವರ ಗುರ್ತು ನನಗೆ ಆಯಿತು. ಮತ್ತು ಅಮಲದಾರರಿಗೆ ನಾನು ಮಿತ್ರತ್ವದ ನಾತೆಯಿಂದ ಬೆಣ್ಣಿ, ಕಣಿಕಿ ಮತ್ತು ಕಟ್ಟಿಗೆಗಳನ್ನು ಮೇಲಿಂದ ಮೇಲೆ ಕಳಿಸಹತ್ತಿದೆನು. ನಾನು ಅಮಲದಾರರ ಮನೆಗೆ ಹೋದಾಗ್ಗೆ ಅವರು ಸಹಿತ ತಾವು ಚಹವನ್ನು ಕುಡಿದ ನಂತರ ನನಗಾದರೂ ಕುಡಿಯಲಿಕ್ಕೆ ಕೊಡುತ್ತಿದ್ದರು ಈ ವ್ಯವಹಾರ ದಲ್ಲಿ ನನಗೂ ಲಾಭವಾಗುತ್ತಿತ್ತು. ಮತ್ತು ಅಮಲದಾರರಿಗೂ ಕೂಡ ಲಾಭ ವಾಯಿತು. ಮುಂದೆ ಕೆಲವು ದಿನಗಳ ನಂತರ ನಾನು ಗೌಡಿಕೆಯನ್ನು ಬಿಟ್ಟರೂ ಕೂಡ ನಾನು ಮೊದಲಿನಂತೆ ಅಮಲದಾರರ ಕಡೆಗೆ ಬೆಣ್ಣಿ ಮೊದಲಾದವುಗಳನ್ನು ಕಳಿಸಿ ಕೊಡಲಿಕ್ಕೆ ಎಂದೂ ತಪ್ಪಲಿಲ್ಲ. ಇದರಂತೆ ಹಳ್ಳಿಯಲ್ಲಿ ದಿವಾಣಿ ಅಥವಾ ಫೌಜದಾರಿ ತಂಟೆಗಳಾದರೆ ನಾನು ವಾದಿ ಅಥವಾ ಪ್ರತಿವಾದಿ ತರ್ಫೆ ಸಾಕ್ಷಿ ಪುರಾವೆಗಳ ಸಹಾಯದ ನಲವಾಗಿ ಕೋರ್ಟು ಕಚೇರಿಗಳಿಗೆ ಹೋಗಲಿಕ್ಕೆ ಪ್ರಾರಂಭಿಸಿದೆನು. ಆದ್ದರಿಂದ ಬಡ ಜನರಿಗೆ ಸಹಾಯ ಮಾಡಿದ ಬಗ್ಗೆ ನನಗೆ ಪುಣ್ಯವು ದೊರಕುತ್ತಿತ್ತು. ಮತ್ತು ಹಣದ ದೃಷ್ಟಿಯಿಂದಾದರೂ ವಿಶೇಷ ನನಗೆ ಲಾಭವಾಗುತ್ತಿತ್ತು. ಈ ಪ್ರಕಾರ ಪ್ರಾಮಾಣಿಕ ರೀತಿಯಿಂದ ಸಂಸಾರ ಮಾಡುವ ಕಾಲಕ್ಕೆ ನನ್ನ ಮೇಲೆ ಪ್ರಾಂತ ಸಾಹೇಬರ ಕೃಪಾ ದೃಷ್ಟಿಯು ಬಿತ್ತು. ಮತ್ತು ಸಾಹೇಬರ ಅನುಗ್ರಹದಿಂದ ನಮ್ಮ ತಾಲೂಕ ಬೋರ್ಡಿಗೆ ಸರಕಾರ ಪತಿಯಿಂದ ನಾನು ಸಭಾಸದನಾದೆನು ಆ ದಿವಸವು ನನ್ನ ಆಯುಷ್ಯದಲ್ಲಿ ಸುವರ್ಣ ಅಕ್ಷರದಿಂದ ಬರೆಯುತಕ್ಕಂಥದಿರು ವದು. ನಾನು ತಾಲೂಕಾ ಲೋಕಲ್ ಬೋರ್ಡದ ಸಭೆಗೆ ನನ್ನ ಗಾಡಿಯಲ್ಲಿ ಕೂತು ಹೋಗುವಾಗ್ಗೆ ಪ್ರತಿಯೊಬ್ಬ ಮನುಷ್ಯನು ನನಗೆ "ಪಾಟೀಲ ಪಾಟೀಲ" ಎಂದು ಆದರ ಪೂರ್ವಕವಾಗಿ ಮಾತಾಡಲಿಕ್ಕೆ ಹತ್ತಿದರು. ನನ್ನ

ಆನಂದವು ಆಕಾಶದಲ್ಲಿಯೂ ಕೂಪ ಹಿಡಿಸಲಾರದಷ್ಟಾಯಿತು. ಈ ಕೆಲಸದಲ್ಲಿ ನನಗೆ ಒಂದು ಎಮ್ಮೆ ನಾಲ್ಕು ಗಾಡಿ ಕಣಕಿ ಮತ್ತು ಎಂಟು ಕುಂಬಳಕಾಯಿ; ಇಷ್ಟು ಖರ್ಚು ಬಂದಿತು. ಆದರೆ ಈ ಕೆಲಸದ ಸಲುವಾಗಿ ನಾನು ಇನ್ನೂ ೪ ಎಮ್ಮೆಗಳನ್ನು ಕೊಡಲಿಕ್ಕೆ ಸಿದ್ಧನಿದ್ದೆನು. ತಾಲೂಕಾ ಲೋಕಲ ಬೋರ್ಡಿಗೆ ಹೋದನಂತರ ನನ್ನ ಭರಭರಾಟಿಯು ಬಹಳೇ ಜೋರಿನಿಂದ ಪ್ರಾರಂಭ ವಾಯಿತು. ಇದೇ ಸಂಧಿಗೆ ಜರ್ಮನ್ ಯುದ್ಧವು ಸುರುವಾಯಿತು. ಮತ್ತು ವಾರಫಂಡನ್ನು ಕೂಡಿಸಲಿಕ್ಕೆ ಸರಕಾರದವರು ಆರಂಭಿಸಿದರು. ನನ್ನ ತಾಲೂಕಿನಲ್ಲಿ ಜನರು ಫಂಡನ್ನು ಕೊಡಲಿಕ್ಕೆ ತಯಾರಿದ್ದಿದ್ದಿಲ್ಲ. ಎಷ್ಟು ಪ್ರಯತ್ನ ಪಟ್ಟರೂ ಫಂಡು ಕೊಡಲೊಲ್ಲರು. ಕಟ್ಟಕಡೆಗೆ ಕಲೆಕ್ಟರರು ಮತ್ತು ಮಾಮಲೇದಾರ ಮೊದಲಾದವರೆಲ್ಲರೂ ಕಲೆತು ನಮ್ಮ ತಾಲೂಕಿನಲ್ಲಿ ಒಂದು ದೊಡ್ಡ ಸಭೆಯನ್ನು ಮಾಡಿದರು. ಈ ಸಭೆಯಲ್ಲಿ ನಾನು ಭಾಷಣ ಮಾಡಿ ವಾರಲೋನಿಗೆ ೧೦೦೦ ರೂಪಾಯಿ ಕೊಡುತ್ತೇನೆಂದು ವಚನವನ್ನು ಕೊಟ್ಟೆನು ಈ ಯುಕ್ತಿಯನ್ನು ಸಾಧಿಸಿ, ನಮ್ಮ ತಾಲೂಕಿನಲ್ಲಿ ಒಂದು ಕಮಿಟಿಯನ್ನು ವಾರಲೋನ ವಸೂಲ ಮಾಡಲಿಕ್ಕೆ ಸ್ಥಾಪಿಸಿ ಅದಕ್ಕೆ ನಾನು ಅಧ್ಯಕ್ಷನಾದೆನು. ಆ ಮೇಲೆ ಏನು ವಿಚಾರಿಸುವದು ? ಹಳ್ಳಿಯಲ್ಲಿ ನನ್ನ ವಿರುದ್ಧ ಇದ್ದ ಎಲ್ಲ ಜನರ ಸಮಾಚಾರವನ್ನು ನಾನು ತಕ್ಕೊಂಡೆನು. ಸರಕಾರಕ್ಕೆ ೧೫-೨೦ಸಾವಿರ ರೂಪಾಯಿಗಳು ಕೂಡಿದವು. ಮತ್ತು ಅವರ ಕೃಪೆಯಿಂದ ನನಗಾದರೂ ೩-೪ ಸಾವಿರ ರೂಪಾಯಿಗಳು ದೊರೆತವು. ಈ ಸಂಧಿಯನ್ನು ಸಾಧಿಸಿ ನನ್ನನ್ನು ಗೌಡಿಕೆಯಿಂದ ತೆಗೆಯಬೇಕೆಂದು ಪ್ರಯತ್ನ ಪಟ್ಟ ಜನರೆಲ್ಲರ ಸಮಾಚಾರವನ್ನು ನಾನು ಚನ್ನಾಗಿ ತಕ್ಕೊಂಡೆನು. ಭರತಿಯ ಸಲುವಾಗಿಯೂ ಕೂಡ ನಾನು ಮನಃಪೂರ್ವಕ ಸರಕಾರದ ಕೆಲಸ ಮಾಡಿದೆನು. ಅವರಲ್ಲಿ ನನ್ನ ಊರಲ್ಲಿಯ ಕೆಲವು ಧಷ್ಟಪುಷ್ಟ ಜನರನ್ನು ಫೌಜದಾರ ಖಾತೆಯಲ್ಲಿ ತೆಗೆದುಕೊಂಡು ಸೈನ್ಯದಲ್ಲಿ ಭರತಿ ಮಾಡಿಸಿದೆನು. ಅವರು ಹತ್ತು ಜನರಿದ್ದರು. ಆದರೆ ಯುದ್ಧದಲ್ಲಿ ಅವರೆಲ್ಲರೂ ಮರಣ ಹೊಂದಲಿಲ್ಲ. ಅವರಲ್ಲಿ ಮೂವರು ಮಾತ್ರ ತಿರುಗಿ ಬಂದರು. ಅವರು ತಮ್ಮ ಜೀವದಾಸೆಯನ್ನು ಬಿಟ್ಟು ಯುದ್ಧಕ್ಕೆ ಹೋದ್ದರಿಂದ ಅವರಿಗೆ ಈಗ ಯಾವ ತರದ್ದೂ ಭಯವಿರುವದಿಲ್ಲ. ಹಿಂದಿನ ದಾವೆಗಳನ್ನು ನನ್ನ ಮೇಲೆ ತೆಗೆಯುವರು. ಬೇಕಾದ ಹಾಗೆ ನನ್ನಮೇಲೇರಿ

ಬರುವರು ಮತ್ತು ವಾರಲೋನದ ಸಲುವಾಗಿ ಎಷ್ಟೋ ಜನರು ನನ್ನ ಮೇಲೆ ಸಿಟ್ಟಾಗಿದ್ದರು ಇನ್ನು ಮೇಲೆ ಊರಲ್ಲಿರುವದು ನೆಟ್ಟಗಲ್ಲೆಂದು ತಿಳಕೊಂಡು ಹೊಲ ಮನೆಗಳ ಯೋಗ್ಯವ್ಯವಸ್ಥ ಮಾಡಿ ನಾನು ಹೆಂಡರು ಮಕ್ಕಳನ್ನು ಕಟ್ಟಿಕೊಂಡು ವಿಜಾಪೂರಕ್ಕೆ ಬಂದೆನು ಇನ್ನು ವಿಜಾಪೂರಕ್ಕೆ ಬಂದ ಮೇಲೆ ನನ್ನ ದೈವವು ಹೇಗೆ ತೆರೆಯಿತು ? ನಾನು ರಾವಸಾಹೇಬ ಪದವಿಗೆ ಹೇಗೆ ಯೋಗ್ಯನಾದೆ ಎಂಬುದನ್ನು ಇನ್ನು ಮುಂದೆ ಹೇಳುವೆ

೩

## ಏರಿಕೆಯ ರೂಪಾಂತರ

ನಾನು ಹಿಂದಿನ ಪತ್ರದಲ್ಲಿ ಹೇಳಿದಂತೆ ವಿಜಾಪೂರಕ್ಕೆ ಬಂದ ಮೇಲೆ ಹೇಗೆ ಘನತೆಗೇರುತ್ತಾ ಹೋದೆನೆಂಬುದನ್ನು ಹೇಳುವೆ.

ವಿಜಾಪೂರಕ್ಕೆ ಬಂದಮೇಲೆ ಸುಮ್ಮನೆ ಕೂಡುವದು ಎಂದೂ ಯೋಗ್ಯವಾಗಲಾರದೆಂದು ವಿಚಾರಿಸಿ ನನ್ನ ಹತ್ತರವಿದ್ದ ಎಲ್ಲ ಭಾಂಡವಲ ಹಾಕಿ ಒಂದು ಅಡತಿ ಅಂಗಡಿ ಸ್ಥಾಪನೆ ಮಾಡಿದೆ. ಮತ್ತು ನಮ್ಮ ಊರ ಕಡೆಯ ಎಲ್ಲ ಮಾಲಿನ ಗಾಡಿಗಳನ್ನು ನಮ್ಮಲ್ಲಿಗೆ ಬರುವಂತೆ ಏರ್ಪಾಡು ಮಾಡಿದೆ. ಈ ಅಡತಿ ಅಂಗಡಿಯಿಂದ ಲಾಭವಾಗಬೇಕೆಂದು ಕಾಯಿದೇಶೀರ ಮತ್ತು ಬೇಕಾಯದೇಶೀರದಿಂದ ಎಷ್ಟು ಪ್ರಯತ್ನಪಟ್ಟರೂ ವ್ಯರ್ಥವಾಯಿತು. ಎಷ್ಟೋ ತರದ ಉಪಾಯಗಳನ್ನು ಯೋಚಿಸಿದರೂ ಸಹಿತ ಅಂಗಡಿಯು ಹಾನಿಯಲ್ಲಿಯೇ ಬಂದಿತು. ಈ ಕೆಲಸದಲ್ಲಿ ನನಗೆ ಯಶವು ದೊರಕಲಾರದೆಂದು ಶ್ರೀಚನ್ನಬಸವೇಶ್ವರರ ಇಚ್ಛೆಯಿದ್ದಂತೆ ತೋರುತ್ತದೆ ಅದರೆ ಎರಡನೇ ವಿಷಯದಲ್ಲಿ ನನಗೆ ತೀವ್ರವೇ ಯಶವು ದೊರೆಯಹತ್ತಿತು.

ವಿಜಾಪೂರ ನಗರದಲ್ಲಿ ಎಷ್ಟೋ ಜನರು ಸರಕಾರಿ ಅಧಿಕಾರಿಗಳಿರುವರು. ನಾನು ವಿಜಾಪೂರಕ್ಕೆ ಬಂದ ಮೇಲೆ ದೊಡ್ಡ ದೊಡ್ಡ ಅಮುಲದಾರರ ಮನೆಗಳಿಗೆ ಹೋಗಿಬರುವ ಪರಿಪಾಠವನ್ನಿಟ್ಟೆನು. ಏನಾದರೂ ಕೆಲಸವಿರಲಿ ವಿಲ್ಲದಿರಲಿ ಅಮುಲದಾರರ ಭೆಟ್ಟಿಯು ನನಗೆ ದಿನಾಲು ಆಗತಕ್ಕದ್ದು ಮುಂಜಾವಿನಲ್ಲಿ ಒಮ್ಮೆ ಯಾರಾದರೊಬ್ಬ ಸರಕಾರಿ ಅಮುಲದಾರರ ಭೆಟ್ಟಿ

ತೆಗೆದುಕೊಂಡು ಅವರಿಗೆ ನೆಲಮುಟ್ಟಿ ನಮಸ್ಕಾರ ಮಾಡದ ಹೊರತು ನನಗೆ ಊಟವು ರುಚಿ ಹತ್ತುತ್ತಿದ್ದಿಲ್ಲ. ಅಮಲದಾರರ ಮನೆಯಲ್ಲಿ ಒಂದು ಶುಭಕಾರ್ಯವಿದ್ದರೆ ಸಾಕು. ಅವರ ಕೆಲಸ ಮಾಡುವದರಲ್ಲಿ ನನಗೆ ಎರಡನೇ ಕಡೆಗೆ ವೇಳೆಯು ಕೂಡ ಸಿಗುತ್ತಿದ್ದಿಲ್ಲ. ಅಮಲದಾರರಿಗೆ ಜೇನೆ ಅಥವಾ ಉರಿ ಬಂದರೆ ನನಗಾದರೂ ಥಂಡಿ ಅದಂತಾಗಿ ನನ್ನದೂ ಮತ್ತು ಅಮಲದಾರರದೂ ತನ್ಮಯವಾದಂತಾಗುವದು. ಒಬ್ಬ ಅಮಲದಾರನು ತನ್ನ ಮನೆಯನ್ನು ಕಟ್ಟಿಸಲಿಕ್ಕೆ ಆರಂಭಿಸಿದರೆ ಅವನಿಗೆ ನಮ್ಮೂರಿಂದ ಕಲ್ಲುಗಳನ್ನು ತೀರ ಅಗ್ಗ ರೀತಿಯಿಂದ ಪೂರೈಸಿದೆನು- ಈ ನನ್ನ ಕನಿಷ್ಟ ಸೇವೆಯು ಪ್ರತಿಫಲವಿಲ್ಲದೆ ಹೋಗಲಿಲ್ಲ. ಕೆಲವು ಅಮಲದಾರರ ಸಹಾಯದಿಂದ ವಿಜಾಪೂರ ನಗರದಲ್ಲಿ ನನಗೆ ಒಂದು ಬೆಂಚ ಮ್ಯಾಜಿಸ್ಟ್ರೇಟ ಜಾಗೆಯು ಲಭಿಸಿತು. ಈ ಕೆಲಸದ ಸಲುವಾಗಿ ನನಗೆ ಸರಕಾರದ ಕಡೆಯಿಂದ ಏನೂ ಸಂಬಳ ಸಿಗದಿದ್ದರೂ ಅನ್ಯರೀತಿಯಿಂದ ನನಗೆ ಬಹಳ ಲಾಭವಾಗುತ್ತಿತ್ತು. ಇರಲಿ. ನಾನು ಬೆಂಚ ಮ್ಯಾಜಿಸ್ಟ್ರೇಟನಾದಂದಿನಿಂದ ನನ್ನ ಸಂಸಾರದ ಖರ್ಚು ಅತ್ಯಂತ ಸುರಳೀತ ರೀತಿಯಿಂದ ಸಾಗಿರುವದು. ಮತ್ತು ಪೋಲೀಸ ಶಿಪಾಯಿಗಳು ಕೂಡ ಹೋಗು ಬರುವ ಕಾಲಕ್ಕೆ ನನಗೆ ನಮಸ್ಕಾರ ಮಾಡಲಿಕ್ಕೆ ಹತ್ತಿದರು.

ನಾನು ಬೆಂಚ ಮ್ಯಾಜಿಸ್ಟ್ರೇಟನಾದರೂ ನನಗೆ ಸಮಾಧಾನವಾಗಲೊಲ್ಲದು ಇನ್ನು ಇದಕ್ಕೂ ಹೆಚ್ಚಿನ ಅಧಿಕ ಹುದ್ದೆಯನ್ನು ದೊರಕಿಸಬೇಕೆಂದು ನನ್ನ ಮನಸ್ಸಿನಲ್ಲಿ ಮಹಾತ್ವಾಕಾಂಕ್ಷೆಯು ಉತ್ಪನ್ನವಾಯಿತು. ನಮ್ಮ ಜಿಲ್ಹೆಯಲ್ಲಿ ಸಹಕಾರಿ ಸಂಸ್ಥೆಗಳು Co-operative ಬಹಳ ಸ್ವಲ್ಪ ಇರುವವು. ಆ ಸಂಸ್ಥೆಗಳನ್ನು ಇನ್ನಿಷ್ಟು ಹೆಚ್ಚಿಗೆ ಬೆಳಿಸಬೇಕೆಂದು ಸರಕಾರಿ ಅಧಿಕಾರಿಗಳು ಪ್ರಯತ್ನಿಸುತ್ತಿದ್ದರು. ಈ ಸುಸಂಧಿಯನ್ನು ಸಾಧಿಸಿ ಬಿನ್ ಪಗಾರಿ ಕೆಲಸ ಮಾಡಲಿಕ್ಕೆ ನಾನು ಸಿದ್ಧನಾದೆನು. ಮತ್ತು ಸಹಕಾರಿ ಸಂಘಗಳ ಸಂಬಳವಿಲ್ಲದ ಸಂಸ್ಥಾಪಕನಾದೆನು. ಇದರಿಂದ ನನ್ನ ಪ್ರತಿಷ್ಠೆಯು ಜಿಲ್ಹೆಯಲ್ಲಿ ಬೆಳೆಯಹತ್ತಿತು.

ಇದೇ ಕಾಲಕ್ಕೆ ಅಂದರೆ ಇನ್‌ಪ್ಲುಎಂಝಾ ಸುರುವಾಗುವದಕ್ಕಿಂತ ಒಂದು ವರ್ಷ ಮೊದಲು ವಿಲಾಯತಿಯಿಂದ ಮಾಂಟೆಗೂ ಎಂಬ ಹೆಸರಿನ

ಸಾಹೇಬರು ಬಂದಿದ್ದರು ಆ ಕಾಲಕ್ಕೆ ಬ್ರಾಹ್ಮಣೇತರರು, ಬಹಳ ಹಿಂದುಳಿದ ಜನರಲ್ಲಿ ಎಷ್ಟು ಪ್ರಯತ್ನ ಬಟ್ಟರೂ ಅವರು ಕಲಿಯಲೊಲ್ಲರು. ಅವರಿಗೆ ದೊಡ್ಡ ದೊಡ್ಡ ಅಧಿಕಾರದ ಜಾಗೆಗಳನ್ನು ಮತ್ತು ಕೌನ್ಸಿಲದಲ್ಲಿ ಕೆಲವು ಜಾಗೆಗಳನ್ನು ಅವರ ದೆಸೆಯಿಂದ ಇಟ್ಟರೆ ಆ ಆಶೆಯಿಂಪಾದರೂ ಅವರು ಶಿಕ್ಷಣವನ್ನು ಪಡೆಯುವರೆಂದು ಒಂದು ಅರ್ಜಿಯನ್ನು ಮಾಂಟೆಗೂ ಸಾಹೇಬರ ಕಡೆಗೆ ಕೊಟ್ಟರು. ಮಾಂಟೆಗು ಸಾಹೇಬರು ಈ ಅರ್ಜಿಯನ್ನು ಮಂಜೂರ ಮಾಡಿ ಅರ್ಜದಾರರಿಗೆ ಶಹಾಬಾಸಕಿಯನ್ನು ಕೊಟ್ಟರು. ಆ ಮೇಲೆ ಕೆಲವು ಶಿಕ್ಷಿತ ಬ್ರಾಹ್ಮಣೇತರರಿಗೆ ಮಾಮಲೇದಾರ ಮುಂತಾದ ದೊಡ್ಡ ದೊಡ್ಡ ಅಧಿಕಾರದ ಸ್ಥಳಗಳು ಸಿಕ್ಕವು. ನನ್ನ ಮನಸ್ಸಿನಲ್ಲಿ ಆಶೆಯು ಹುಟ್ಟಿತು ಆದರೆ ದುರ್ದೈವದಿಂದ ನಾನು ಏನೂ ಶಿಕ್ಷಣವನ್ನು ಪಡೆದಿದ್ದಿಲ್ಲವಾದರೂ ಸಹಿತ ನನ್ನ ಮಗನಾದರೂ ಮಾಮಲೇದಾರನಾಗಬೇಕೆಂದು ನನ್ನ ಪ್ರಯತ್ನಗಳು ಸುರುವಾದವು.

ಆದರೆ ಇದಕ್ಕೆ ಗಂಡಾಂತರಗಳು ಬಹಳವಿದ್ದವು. ಬ್ರಾಹ್ಮಣೇತರರಲ್ಲಿ ಬ್ರಾಹ್ಮಣರ ಹೊರ್ತಾಗಿ ಉಳಿದ ಎಲ್ಲ ಜಾತಿಗಳು, ಅಂದರೆ ಲಿಂಗಾಯತ ರಡ್ಡಿ, ಬಡಿಗೇರ, ಕ್ರಿಶ್ಚನ್, ಮುಸಲ್ಮಾನ, ಹೊಲೇರ, ಮಾದಿಗ, ಮರಾಠಾ ರಜಪೂತ ಮೊದಲಾದ ಜಾತಿಗಳ ಸಮಾವೇಶವಾಗಿದ್ದಿತು. ನಮ್ಮ ಪ್ರಾಂತದ ಚಳವಳಿ ಮಾಡುವ ಬಹುಜನ ಮುಖಂಡರು ಲಿಂಗಾಯತರಿದ್ದುದರಿಂದ ಬ್ರಾಹ್ಮಣೇತರ ಇದರ ಅರ್ಥವನ್ನು ಕೇವಲ ಲಿಂಗಾಯತ ಎಂದು ಮಾಡುವದು ನನ್ನ ದೃಷ್ಟಿಗೆ ಬಿದ್ದಿತು. ಇದು ಅಸ್ವಾಭಾವಿಕವೂ ಇದ್ದಿಲ್ಲ. ಯಾಕಂದರೆ ನೋಕರಿ ಮೊದಲಾದ ಕೆಲಸಕ್ಕೆ ಅರ್ಜಿಯನ್ನು ಮಾಡಿದ ಪಸೀಲಿ ಹಚ್ಚಿದ ಲಿಂಗಾಯತ ಜನರಿಗಷ್ಟೇ ನೌಕರಿಯನ್ನು ಕೊಡಲಿಕ್ಕೆ ಹತ್ತಿದರು. ಇದರಿಂದ ನಾನು ಗಾಬರಿಯಾದೆನು. ಯಾಕಂದರೆ ನಾನು ಜನ್ಮತಃ ರಡ್ಡೀ ಇರುವೆನು, ಇನ್ನು ಹೇಗೆ ಮಾಡಬೇಕೆಂದು ನಾನು ಗೊಂದಲದಲ್ಲಿ ಬಿದ್ದೆನು. ಕಟ್ಟ ಕಡೆಗೆ ನನ್ನ ಸುದೈವದಿಂದ ಒಂದು ' ಸರಳ ಮಾರ್ಗವು ಹೊಳೆಯಿತು. ನಾನೂ ಲಿಂಗರಡ್ಡಿಯಲ್ಲವೇ ಎಂದುಕೊಂಡೆ ನನ್ನ ಮಗನು ಮಾಮಲೇದಾರನಾಗಲಿಕ್ಕೆ ಯಾವ ತರದ ಅಡಚಣಿಯೂ ಇದ್ದಿದ್ದಿಲ್ಲ. ಕೇವಲ ಅವನು ಮ್ಯಾಟ್ರಿಕ್ ಪಾಸಾಗಿ

ಬಿ. ಎ ದಲ್ಲಿ ತೇರ್ಗಡೆ ಹೊಂದತಕ್ಕದ್ದೊಂದೇ ಉಳಿಯಿತು. ನಾನು ಲಿಂಗ ರಡ್ಡಿಯಾದುದು ನನಗೆ ಬಹಳೇ ಲಾಭವಾಯಿತು.

ನಂತರ ನಾನು ದೊಡ್ಡ ದೊಡ್ಡ ಪ್ರಮುಖ ಜನರಲ್ಲಿ ಸುಳಿದಾಡ ಹತ್ತಿದೆನು. ಮತ್ತು ನನ್ನ ಮುಖದಿಂದ ಸಭಾ, ಕಮಿಟಿ, ಸೊಸಾಯಿಟಿ ವಗೈರೆ ಶಬ್ದಗಳು ಯಾವಾಗಲೂ ಹೊರಬೀಳುತ್ತಿದ್ದವು. ಬ್ರಾಹ್ಮಣೇತರ ಜನರ ಪ್ರತಿಯೊಂದು ಸಣ್ಣ ದೊಡ್ಡ ಮತ್ತು ಚಲೋ ಕೆಟ್ಟ ಚಳವಳಿಗಳಲ್ಲಿ ನಾನು ಮುಂದೆ ಸ್ವಲ್ಪದರಲ್ಲಿ ಹೇಳುವದೆಂದರೆ ನಾನು ಬ್ರಾಹ್ಮಣೇತರ ಜನರ ಮುಂದಾಳು ಆದೆನು. ಕಾಲಕಾಲಕ್ಕೆ ಬ್ರಾಹ್ಮಣರಿಗೆ ಬಯ್ಯುವದು ಬ್ರಾಹ್ಮಣ ಕುಲಕರ್ಣಿಯರು ಮತ್ತು ಬ್ರಾಹ್ಮಣ ಅಮಲದಾರರು ಲಂಚವನ್ನು ತಕ್ಕೊಳ್ಳುವರು, ರೈತ ಜನರನ್ನು ಪೀಡಿಸುವರು, ಮತ್ತು ಬ್ರಾಹ್ಮಣೇತರ ಅಮಲದಾರರು ಬೇಕು ಮೊದಲಾದ ಭಾಷಣಗಳನ್ನು ಮಾಡಿ ಸ್ವಲ್ಪ ದಿವಸಗಳಲ್ಲಿ ಲೋಕಪ್ರಿಯನಾದೆನು. ಬ್ರಾಹ್ಮಣರಿಗೆ ಬೈಗಳನ್ನು ಬೈದರು ಕೂಡ ಬ್ರಾಹ್ಮಣ ಅಮಲದಾರರ ಕಡೆಗೆ ಹೋಗಿ ಅವರ ಬಾಲಾ ಬಡಿಯುವದನ್ನು ಸರ್ವಥಾ ಬಿಡಲಿಲ್ಲ. ಪ್ರಸಂಗ ಬಂದರೆ ಅಮಲದಾರರ ಮುಂದೆ ಬ್ರಾಹ್ಮಣರ ಸ್ತುತಿಯನ್ನು ಮಾಡಿ ಹಿಂದೆ ಬ್ರಾಹ್ಮಣೇತರರನ್ನು ನಿಂದಿಸಿ ನನ್ನ ಕಾರ್ಯವನ್ನು ಸಾಧಿಸುತ್ತಿದ್ದೆನು

ಇನ್‌ಫ್ಲುಯೆಂಝಾ ಬಂದ ವರ್ಷ ಎಪ್ರಿಲ ತಿಂಗಳಲ್ಲಿ ನಮ್ಮ ನಗರದಲ್ಲಿಯ ಬ್ರಾಹ್ಮಣ ವಕೀಲರು ಕೂಡಿ ಒಂದು ಜಾಹೀರ ಸಭೆಯನ್ನು ಕರೆದರು. ಆ ಸಭೆಗೆ ಪುಣೆ ಮುಂಬಯಿ ಕಡೆಯ ಪ್ರಮುಖ ಜನರು ಬಂದಿದ್ದರು. ಅದಕೂ ಮೊದಲು ಪುಣೆಯ ಟಿಳಕರಾದರೂ ಕೂಡ ಬಂದಿದ್ದರು. ಆ ಜನರು ಬ್ರಾಹ್ಮಣ ಬ್ರಾಹ್ಮಣೇತರಲ್ಲಿ ಒಕ್ಕಟ್ಟನ್ನು ಮಾಡಬೇಕೆಂದು ಎಷ್ಟು ಪ್ರಯತ್ನಿಸಿದರೂ ಕೂಡ ನಾವು ಅದಕ್ಕೆ ಅಡ್ಡಗಾಲನ್ನು ಹೊಡೆದೆವು. ಯಾಕಂದರೆ ಒಟ್ಟಾದ ಮೇಲೆ ನಮ್ಮಂಥವರನ್ನು ಯಾರು ವಿಚಾರಿಸುವರು? ಅವರೂ ಒಂದು ಸಭೆಯನ್ನು ಕೂಡಿಸಿದರು. ಮತ್ತು ನಾವು ಒಂದು ಬ್ರಾಹ್ಮಣೇತರರ ಸಭೆಯನ್ನು ಕರೆದೆವು. ಮತ್ತು ದೊಡ್ಡ ಸಮಾರಂಭವನ್ನು ಮಾಡಿದೆವು ನಮ್ಮ ಸಮಾರಂಭದಿಂದ ಸರಕಾರಕ್ಕೆ ಸಂತೋಷವಾಗಿದೆಯೆಂದು ಅನಿಸಿತು.

ಆ ಮೇಲೆ ಕೆಲವು ದಿವಸಗಳ ನಂತರ ಗಾಂಧಿ ಚಳವಳಿಯು ಪ್ರಾರಂಭವಾಯಿತು. ನನ್ನ ಕೆಲಸವನ್ನು ನಿರೀಕ್ಷಿಸಿದರೆ ನಾನು ರಾವಸಾಹೇಬನಾಗಲಿಕ್ಕೆ ಯೋಗ್ಯನಿರುವೆನು. ಆದರೆ ನನ್ನ ಕಾರ್ಯವು ಗವ್ಹರ್ನರ ಸಾಹೇಬರ ನಿರೀಕ್ಷಣೆಗೆ ಯಾಕೆ ಬರಲೊಲ್ಲದೆಂಬದು ನನಗೆ ಹೊಳೆಯಲೊಲ್ಲದು.

೪

## ಆಯುಷ್ಯದ ಆಯಕಟ್ಟು

ಈ ಪತ್ರ್ರದಲ್ಲಿ ನನ್ನ ಆಯುಷ್ಯದಲ್ಲಿಯ ಅತ್ಯಂತ ಆಯಕಟ್ಟಿನ ಪ್ರಸಂಗದ ವರ್ಣನೆಯನ್ನು ಮಾಡಲಿದುವೆನು

ಮಹಾತ್ಮಾ ಗಾಂಧಿಯವರ ಚಳವಳಿಯು ಇಡೀ ದೇಶದಲ್ಲೆಲ್ಲ ಪ್ರಾರಂಭವಾದಂತೆ ನಮ್ಮ ಜಿಲ್ಲೆಯಲ್ಲಿಯೂ ಪ್ರಾರಂಭವಾಯಿತು ಪದವಿಗಳನ್ನೂ ಶಾಲೆಗಳನ್ನೂ ಸಂಬಳವುಳ್ಳ ಹಾಗೂ ಸಂಬಳವಿಲ್ಲದ ಎಲ್ಲ ಸರಕಾರೀ ನೌಕರಿಗಳನ್ನೂ ಬಿಡಬೇಕೆಂದು ಎಲ್ಲೆಡೆಯಲ್ಲಿಯೂ ಉಪದೇಶವು ಪ್ರಾರಂಭವಾಯಿತು ವಿಜಾಪುರದಲ್ಲಿ ಕೆಲವು ವಕೀಲರು ವಕೀಲಿಯನ್ನು ಬಿಟ್ಟರು. ಈಗ ಮಾತ್ರ ನಾವು ಏನು ಮಾಡುವೆವೆಂಬ ಕಡೆಗೆ ಕೆಲ ಜನರ ಲಕ್ಷವು ಹೊರಳಹತ್ತಿತು. ಆದರೆ ನಾವು ಕ್ವಚಿತ್ತಾಗಿ ಮೋಸ ಹೋಗುವವರು. ಬ್ರಾಹ್ಮಣರಿಗೆ ಸರಕಾರದವರು ನೌಕರಿಯನ್ನು ಕೊಡುವದಿಲ್ಲವೆಂದು ತಿಳಿದು ನೌಕರಿಯನ್ನು ಬಿಟ್ಟುಕೊಡಿರೆಂದು ಬ್ರಾಹ್ಮಣರು ಉಪದೇಸಿಸುತ್ತಿರುವರೆಂದೂ, ಬ್ರಾಹ್ಮಣರೆಲ್ಲರೂ ಕಲಿತು ಸುಶೀಕ್ಷಿತರಾದರು; ಬ್ರಾಹ್ಮಣೇತರರು ಮಾತ್ರ ಕಲಿಯಬಾರದೆಂಬ ದುರುದ್ದೇಶದಿಂದ ಸಾಲೆಗಳನ್ನು ಬಿಡಲಿಕ್ಕೆ ಹೇಳುತ್ತಿರುವರಾದ್ದರಿಂದ ಬ್ರಾಹ್ಮಣೇತರರು ಈ ಚಳವಳಿಯಲ್ಲಿ ಸೇರಿಕೊಳ್ಳದೆ ಸರಕಾರದ ಬಗಲು ಗೂಸುಗಳಾಗಿಯೇ ತಮ್ಮ ಉತ್ಕಾರವನ್ನು ಮಾಡಿಕೊಳ್ಳಬೇಕೆಂದೂ ನಾವು ನಮ್ಮ ಉಪದೇಶವನ್ನು ಆರಂಭಿಸಿದೆವು ಸಂಬಳವಿಲ್ಲದೇ ಇರಲಿ; ಕೈಯಲ್ಲಿ ಬಂದ ನೌಕರಿಯನ್ನು ಕಳೆದುಕೊಳ್ಳುವವರಾರು? ಗಾಂಧೀ ಜನರು ಮಾತ್ರ ಹಳ್ಳಿ ಹಳ್ಳಿಗೆ ಹೋಗಿ ವ್ಯಾಖ್ಯಾನಗಳ ಸುಗ್ಗಿಯನ್ನೇ ಸುರು ಮಾಡಿದರು. ಇಂಥ ದೊಡ್ಡ ಇಂಗ್ರೇಜಿ ಸರಕಾರಕ್ಕೂ ಅವರನ್ನು ಕಂಡರೆ ಅಂಜಿಕೆ

ಯಾಗಹತ್ತಿತು. ಆದರೆ ಒಂದು ವರ್ಷದ ಒಳಗಾಗಿಯೇ ಗಾಂಧಿ ಚಳವಳಿಗೆ ಇಳಿಗಾಲದ ಕಳೆಯು ಬರಹತ್ತಿತು. ಕೆಲ ಜನ ಚಳವಳಿಗಾರವಕೀಲರ ಮೇಲೆ ಖಟ್ಲೆಯನ್ನು ಮಾಡಿದರು. ಅದರಲ್ಲಿ ಹಳ್ಳಿಗಳಲ್ಲಿಯ ಬ್ರಾಹ್ಮಣೇತರ ಜನರ ಸಾಕ್ಷಿಗಳಾದವು ಸರಕಾರದವರ ಮನಸ್ಸಿನಂತೆ ಸಾಕ್ಷಿಯನ್ನು ಹೇಳಿ ಚಳವಳಿ ಜನರನ್ನು ಸೆರೆಮನೆಗಳಲ್ಲಿ ನೂಕುವ ಕಾರ್ಯದಲ್ಲಿ ನೆರವಾದುದಕ್ಕೆ ಕೆಲ ಬ್ರಾಹ್ಮಣೇತರರು ಸರಕಾರದ ಮೆಚ್ಚಿಗೆಗೆ ಪಾತ್ರರಾದರು. ಗಾಂಧಿ ಅನುಯಾಯಿಗಳ ವಿರುದ್ಧ ಹಳ್ಳಿಹಳ್ಳಿಗಳಲ್ಲಿಯೂ ತಾವೂ ಸಭೆಗೂಡಿಸಿ ಚಳವಳಿ ಜನರ ವಿರೋಧ ಮಾಡಬೇಕೆಂದು ಬ್ರಾಹ್ಮಣೇತರ ಜನರು ಒಂದು ಸಂಘವನ್ನು ಸ್ಥಾಪಿಸಿ ಅದಕ್ಕೆ ರಾಜನಿಷ್ಠ ಸಂಘವೆಂದು ಹೆಸರಿಟ್ಟರು. ಗೌಡರ ದೊಡ್ಡ ಪರಿಷತ್ತು ಕೂಡಿತು ಆ ಪರಿಷತ್ತಿಗೆ ಸ್ವತಃ ಕಲೆಕ್ಟರ ಸಾಹೇಬರೇ ಅಧ್ಯಕ್ಷರಾದರು. ಅರ್ಥಾತ್ ಮೇಲಿನ ಎಲ್ಲ ಕಾರ್ಯದಲ್ಲಿಯೂ ನಾನು ಪ್ರಾಮುಖ್ಯವಾಗಿ ಭಾಗಿಯಾಗಿದ್ದೆನು. ಇದ್ದಬಿದ್ದ ಜನರ ಬಾಯಿಯಲ್ಲಿ ಬಸನಗೌಡನ ಹೆಸರೇ ಹೆಸರು. ಕೆಲ ಜನರು ಒಮ್ಮೊಮ್ಮೆ ನನಗೆ "ಬಸವಂತರಾವ" ಎಂದು ಸಹ ಕರೆಯಹತ್ತಿದರು. ಬ್ರಾಹ್ಮಣ ಜನರ ಫಜೀತಿಯು ಚೆನ್ನಾಗಿ ಆಯಿತು.

ಬ್ರಾಹ್ಮಣರನ್ನು ಫಜೀತಿ ಮಾಡಬೇಕೆಂದು ಒಬ್ಬ ದೊಡ್ಡಅಧಿಕಾರಸ್ಥನ ಸಲಹೆಯಿಂದ ಕೊಲ್ಹಾಪುರದ ಸತ್ಯಶೋಧಕರ ಒಂದು ನಾಟಕ ಮಾಡಿಸಲಾಯಿತು.

ಗಾಂಧಿಯು ಸೆರೆಯಾಳಾದ ಕೂಡಲೇ ಚಳವಳಿಯು ತನ್ನಿಂದ ತಾನೇ ಕಡಿಮೆಯಾಗಹತ್ತಿತು. ಆದುದರಿಂದ ನಮ್ಮಂತಹ ಜನರಿಗೆ ಏನೂ ಕೆಲಸವು ಉಳಿಯಲಿಲ್ಲ. ಆದರೂ ನಮ್ಮ ಜಿಲ್ಹೆಯ ಕಲೆಕ್ಟರರು ಕುರುಡರ ವಿಷಯವಾಗಿ ಬಹಳ ಕಾಳಜಿಯನ್ನು ತೆಗೆದುಕೊಳ್ಳುತ್ತಿದ್ದರು. ಕುರುಡರ ಫಂಡನ್ನು ಕೂಡಿಸುವ ಅವರ ಕಾರ್ಯದಲ್ಲಿ ನಾನು ಅವರಿಗೆ ಸ್ವಹಸ್ತ ಪರಹಸ್ತಗಳಿಂದ ನೆರವಾಗಲು ಉದ್ಯುಕ್ತನಾದೆನು. ನನ್ನ ಮೇಲೆ ಈ ಸಾಹೇಬರ ಪೂರ್ಣ ಕೃಪಾದೃಷ್ಟಿಯು ಇದೆ. ಇಲ್ಲಿಂದ ಅವರಿಗೆ ವರ್ಗವಾದರೂ ನನಗೆ ಇನ್ನೂ ಅವರಿಂದ ಪತ್ರಗಳು ಬರುತ್ತವೆ. ನನ್ನ ದೈವವೇ ದರಿದ್ರವಾಗಿದೆ. ಶ್ರೀ.

ಚನ್ನಬಸವೇಶ್ವರರ ಕೃಪೆಯಿಂದ ಕುರುಡರ ಸಾಹೇಬ–ಅವರ ಹೆಸರು ಹೆಂಡರಸನ್ನ–ಇನ್ನೂ ವಿಜಾಪುರದ ಕಲೆಕ್ಟರರಾಗುಳಿದಿದ್ದರೆ ನಿಜವಾಗಿಯೂ ಇಷ್ಟರಲ್ಲಿ ನಾನು ರಾವಬಹಾದ್ದೂರನಾಗಿ ಬಿಡುತ್ತಿದ್ದೆನು.

ಅವರು ತೆಗೆದ ಪ್ರತಿಯೊಂದು ನಿಧಿಗೂ ನನ್ನ ನೆರವು ಇದೆ. ಅವರು ರೆಡ್‌ಕ್ರಾಸ್‌ವೆಂದು ಸಾಹೇಬ ಜನರ ದಾಯಿಯರ ಸಲುವಾಗಿ ಒಂದು ಫಂಡನ್ನು ತೆಗೆದರು. ಅದರಲ್ಲಿ ನಾನು ಜೀವದ ಹಂಗು ದೊರೆದು ಪ್ರಯತ್ನ ಮಾಡಿದೆನು ಖಾದಿಯ ಮೇಲೆಯೂ, ಗಾಂಧಿ ಟೊಪ್ಪಿಗೆಯ ಮೇಲೆಯೂ ಅವರು ಸಿಟ್ಟಾಗಿರುವರೆಂದು ತಿಳಿದ ಕೂಡಲೇ ನಾನು ಶುದ್ಧ ಅಚ್ಚ ಪರದೇಶೀ ಬಟ್ಟೆಯನ್ನೇ ಧರಿಸಹತ್ತಿದೆನು. ಯಾಕಂದರೆ ಶುದ್ಧ ಸ್ವದೇಶೀ ಗಿರಣೀ ಅರಿವಿಯ ಮೇಲೆ ಸಹ ಸಾಹೇಬರ ಸಿಟ್ಟು ಅದೆಯೋ ಎನೋ ಯಾರಿಗೆ ಗೊತ್ತು ?

ನನ್ನ ಉಡಿಗೆಯನ್ನು ನಾನು ಕೆಳಗಿನಂತೆ ಗೊತ್ತು ಮಾಡಿ ಬಿಟ್ಟಿದ್ದೇನೆ. ಯಾವಾಗಲೂ ಸಾಹೇಬ ಜನರ ಭೆಟ್ಟಿಗೆ ಹೋಗುವ ಪ್ರಸಂಗವು ನನಗೆ ಬರುವದರಿಂದ ನಾನು ಯಾವಾಗಲೂ ಬೂಟುಗಳನ್ನು ಹಾಕುತ್ತಲಿದ್ದೇನೆ. ನನ್ನ ಕಾಲುಚೀಲಗಳು ಒಳ್ಳೇ ಹಸರು ಬಣ್ಣದ್ದಿರುತ್ತವೆ ಅವುಗಳನ್ನು ಏರಿಸಿ ಮೇಲೆ ಕಟ್ಟುವದು ನನಗೆ ವಿಶೇಷ ತೊಂದರೆಯೆನಿಸುತ್ತದೆ. ಆದ್ದರಿಂದ ಆ ಕಾಲುಚೀಲಗಳು ಸಡಿಲಾಗಿ ನನ್ನ ಕಾಲುಗಳಲ್ಲಿ ಹಾಗೇ ಬಡಿದಾಡುತ್ತಿರುತ್ತವೆ. ಮೇಲಿಂದ ಮೇಲೆ ನನಗೆ ಮೂತ್ರ ಬಾಧೆಯಾಗುವದರಿಂದ ನನಗೆ ಪಾಟಲೋನ ಹಾಕಿಕೊಳ್ಳದೆ ಧೋತರವನ್ನೇ ಉಟ್ಟುಕೊಳ್ಳಬೇಕಾಗುತ್ತದೆ ಈ ವಿಷಯವಾಗಿ ನನಗೆ ಅಂತ್ಯಂತ ಕೆಡಕೆನಿಸುತ್ತದೆ. ಮೈಯ್ಯಲ್ಲಿ ಒಂದು ಪೈರಣ, ಅದರ ಮೇಲೆ ಜಾಕೀಟು ಮತ್ತು ಕೋಟು ಹಾಕಿಕೊಳ್ಳುತ್ತೇನೆ. ಕೋಟು ಕರಿಯದು ಇರುತ್ತದೆ. ಅದು ಹೊಲಸಾದರೂ ಕಾಣಿಸುವದಿಲ್ಲ. ಆದರೆ ಪೈರಣವು ಮೇಲಿಂದ ಮೇಲೆ ಹೊಲಸಾಗುತ್ತದೆ. ಹೊಲಸಾದುದು ಸಾಹೇಬರ ಕಣ್ಣಿಗೆ ಬೀಳಬಾರದೆಂದು ತಿಳಿದು ನಾನು ಒಂದು ಸಾಮೂನೆಯ (ಚೌಕೋನ) ಅರಿವೆಯನ್ನು ಕೊರಳಿಗೆ ಸುತ್ತುವೆನು. ಇದಕ್ಕೆ ಮಫ್ಲರವೆಂದು ಕರೆಯುತ್ತಾರೆ. ಈ ಉಡುಪಿನಿಂದ ನಾನು ಅತ್ಯಂತಸಂಭಾವಿತನಂತೆ ತೋರುತ್ತೇನೆ. ಇದಿಷ್ಟು ನನ್ನ ಉಡಿಗೆ.

ಗಾಂಧೀ ಚಳವಳಿಯು ನಿಂತುದರಿಂದ ನಾನು ಈಗ ನಿಶ್ಚಿಂತನಾಗಿದ್ದೇನೆ ಯಾಕಂದರೆ ಈ ಚಳವಳಿಯಲ್ಲಿ ನನ್ನ ಬೆಂಚ ಮ್ಯಾಜಿಸ್ಟ್ರೇಟ ನೌಕರಿಯು ಹೋಗುತ್ತದೆಯೋ ಏನೋ ಎಂಬ ಭೀತಿಯು ಉಂಟಾಗಿತ್ತು. ಕುಚೇಷ್ಟೆಯಿಲ್ಲದೆ ಪ್ರತಿಷ್ಠೆಯು ಬೆಳೆಯಲಾರದೆಂಬ ತತ್ವವನ್ನು ನಾನು ಮನಗಂಡಿದ್ದೇನೆ ಈ ತತ್ವದ ಪ್ರಕಾರದ ಮುನಿಸಿಪಾಲಿಟಿ ಲೋಕಲಬೋರ್ಡುಗಳ ಕಾರ್ಯದಲ್ಲಿ ವಿಶೇಷ ಮನಸ್ಸಿಡಹತ್ತಿದೆನು ಈ ಸಂಸ್ಥೆಗಳ ಉಪಯೋಗವನ್ನು ನನ್ನ ಸ್ವಂತದ ಕೆಲಸದಲ್ಲಿ ಹೇಗೆ ಮಾಡಿಕೊಳ್ಳುತ್ತೇನೆಂಬುದನ್ನು ಅವುಗಳ ಸಹಾಯದಿಂದ ನನಗೆ ರಾವಸಾಹೇಬ ಪದವಿಯು ಸಿಗುವದು ಹೇಗೆ ಸಂಭವನೀಯವಿದೆ ಯೆಂಬುದನ್ನೂ ಸವಿಸ್ತಾರವಾಗಿ ಮುಂದಿನ ಪತ್ರದಲ್ಲಿ ವರ್ಣಿಸುವೆನು

*

## ಮುನಸಿಪಾಲಿಟಿಯ ಪುರಾಣ

ಈ ಪತ್ರದಲ್ಲಿ ನಾನು ಮುನಸಿಪಾಲಿಟಿಯಲ್ಲಿ ಯಾವ ಕಾರ್ಯಗಳನ್ನು ಮಾಡಿದೆನೆಂಬುದನ್ನು ಉಲ್ಲೇಖಿಸುವೆನು. ಮುನಸಿಪಾಲಟಿಯ ಪುರಾಣವೆಂದರೆ, ಮೆಂಬರ ಜನರ ಚುನಾವಣೆಯಿಂದ ಉಪಕಮೀಟಿಗಳ ಚುನಾವಣೆಯ ಪರ್ಯಂತ, ಚೀಫ ಆಫೀಸರನ ಪಗಾರ ಬಡತಿಯಿಂದ ಟೋಲ ನಾಕೆಯ ಕಾರಕೂನನ ನೇಮಣೂಕಿಯ ವರೆಗೆ, ಒಂದು ದೊಡ್ಡ ಎಂಜನ್ನಿನ ಖರೀದಿಯಿಂದ ಒಂದು ಕಸಬರಿಗೆಯ ಖರೀದಿಯ ವರೆಗೆ, ಇವೆಲ್ಲವುಗಳು ಸಮಾವೇಶವಾತ್ತವೆ. ಇವೆಲ್ಲವುಗಳನ್ನು ಬರೆಯುತ್ತ ಹೋದರೆ ಕತ್ತೆ ಹೊರಲಾರದಷ್ಟು ಗ್ರಂಥವಾಗಬಹುದು. ಆದ್ದರಿಂದ ನನಗೆ ಸಂಬಂಧವಾಗಿ ಎಷ್ಟು ಹೇಳಬೇಕಾಗುವದೋ ಅಷ್ಟು ಹೇಳುವೆನು.

ನಾನು ಮುನಸಿಪಾಲಿಟಿಯ ಚುನಾವಣೆಯಲ್ಲಿ ಉಮೇದವಾರನಾಗಿ ನಿಂತು ಅನೇಕ ಯುಕ್ತಿ ಸಾಹಸಗಳಿಂದ ಆರಿಸಿ ಬಂದೆನು. ಈ ಕೆಲಸದಲ್ಲಿ ನಾನು ೨೦೦೦ ರೂಪಾಯಿ ಖರ್ಚು ಮಾಡಬೇಕಾಯಿತು. ಮುಂದೆ ಮೂರು ವರುಷಗಳಲ್ಲಿ ಇಷ್ಟು ರೂಪಾಯಿಗಳನ್ನು ಹೇಗಾದರೂ ಗಳಿಸಬಹುದೆಂದು ತಿಳಿದು ಇಷ್ಟು ಖರ್ಚು ಮಾಡಿದೆನು. ಆದರೆ ನನ್ನ ಆಪ್ತೇಷ್ಟರಲ್ಲಿ ಯಾರೂ

ಮಕ್ತೆದಾರರಿಲ್ಲದ್ದರಿಂದಲೂ ಮತ್ತು ಮುನಸಿಪಾಲಿಟಿಯ ಕೆಲಸಕ್ಕಾಗಿ ಬಾಡಿಗೆ ಯನ್ನು ಕೊಡಲಿಕ್ಕೆ ಸ್ವಂತ ಯಾವೂ ಮನೆಯಿಲ್ಲದ್ದರಿಂದಲೂ, ಮತ್ತು ನನ್ನ ದುರ್ದೈವದಿಂದ ಮುನಿಸಿಪಾಲಿಟಿಯಲ್ಲಿ ಯಾವ ದೊಡ್ಡ ಜವಾಬದಾರಿಯ ಕೆಲಸಗಳು ಸಿಗದ್ದರಿಂದಲೂ, ಮೂರು ವರ್ಷಗಳಲ್ಲಿ ೫೦೦–೬೦೦ ರೂಪಾಯಿ ಗಳಿಗಿಂತ ಹೆಚ್ಚು ನನ್ನ ಪದರಿನಲ್ಲಿ ಬೀಳಲಿಲ್ಲ ನನಗೆ ಮುನಸಿಪಾಲಿಟಿಯ ಬಗ್ಗೆ ಅನಾದರವು ಉತ್ಪನ್ನವಾಯಿತು ಮುನಸಿಪಾಲಿಟಿಯ ಮೆಂಬರನಾಗಿ ೨೦–೨೫ ವರ್ಷಗಳ ವರೆಗೆ ತಮ್ಮ ಸಂಸಾರದ ಖರ್ಚನ್ನು ನಿರಾಯಾಸವಾಗಿ ಗಳಿಸುವವರನ್ನು ನೋಡಿದರೆ ನನ್ನ ಮನದಲ್ಲಿ ಅವರ ಬಗ್ಗೆ ಪೂಜ್ಯಬುದ್ಧಿಯು ಉತ್ಪನ್ನವಾಗುತ್ತದೆ. ಅಂಥ ಮೆಂಬರರೇ ಧನ್ಯ ! ಅದು ಏನೇ ಇರಲಿ. ಮೂರು ವರ್ಷಗಳಲ್ಲಿ ನನಗೆ ೨೪೦೦ ರೂಪಾಯಿ ಹಾನಿಯಾದ್ದರಿಂದ ನಾನು ಮುನಸಿ ಪಾಲಿಟಿಯ ಚುನಾವಣಿಯ ಉಸಾಬರಿಯನ್ನು ಬಿಟ್ಟು ಬಿಟ್ಟೆನು. ಆದರೆ ಮುನಸಿಪಾಲಿಟಿಯಿಂದ ಹಣವನ್ನು ಗಳಿಸುವ ಯುಕ್ತಿಯನ್ನು ಯೋಚಿಸಿ ದೆನು.

ಪ್ರತಿ ವರ್ಷ ನಮ್ಮ ಜಿಲ್ಹೆಯಲ್ಲಿ ಶೆರೆ, ಸಿಂದಿ ಗುತ್ತೆಗಳು ಲಿಲಾವು ಮಾಡಲ್ಪಡುವವು. ಆ ಸಮಯಕ್ಕೆ ಆ ಗುತ್ತೆಗಳನ್ನು ಹಿಡಿಯದಿದ್ದರೂ ಲಿಲಾವಿನಲ್ಲಿ ಹಣವನ್ನು ಏರಿಸಲಿಕ್ಕೆ ಕೆಲವು ಗೃಹಸ್ಥರು ಬರುತ್ತಾರೆ, ಇದನ್ನು ನೋಡಿ ಆ ಗುತ್ತೆಗಳನ್ನು ಹಿಡಿಯಲಿಚ್ಛಿಸುವವರು ಬೆದರಿ ಲಿಲಾವಿನ ಹಣ ವನ್ನು ಹೆಚ್ಚಿಸಬಾರದೆಂದು ತಿಳಿದು ಅವರ ಕಿಸೆಯಲ್ಲಿ ೨೦೦–೪೦೦ ರೂಪಾಯಿ ಗಳನ್ನು ಹಾಕಿ ಅವರನ್ನು ಸಮ್ಮನೆ ಕೂಡಿಸುತ್ತಾರೆ. ಈ ಯುಕ್ತಿಯು ಸರ್ವೋತ್ಕೃಷ್ಟವಾದದ್ದೆಂದು ತಿಳಿದು ನಾನೂ ಒಂದು ವಾರ್ಡಿನ ವತಿಯಿಂದ ಮುನಸಿಪಾಲಿಟಿಯ ಉಮೇದವಾರನಾಗಿ ನಿಂತುಕೊಂಡೆನು. ಮತ್ತು ಆದೇ ವಾರ್ಡಿಗೆ ಮತ್ತೊಬ್ಬ ಉಮೇದವಾರನು ನಿಂತು ನನಗೆ ೧,೦೦–೪೦೦ ರೂಪಾಯಿ ಗಳನ್ನು ಕೊಟ್ಟರೆ ತೀರಿತು. ಅವನ ವತಿಯಿಂದ ನಾನು ರಾಜಿನಾಮೆಯನ್ನು ಕೊಟ್ಟು ಬಿಡುತ್ತಿದ್ದೆನು. ಈ ರೀತಿಯಿಂದ ತಿಂಗಳೆರಡು ತಿಂಗಳ ನನ್ನ ಸಂಸಾರದ ಖರ್ಚು ಸಾಗಲಾರಂಭಿಸಿತು.

ನಾನು ಮುನಸಿಪಾಲಿಟಿಯ ಮೆಂಬರನಿರುವವರೆಗೆ ಸರಕಾರದ ಮರ್ಜಿ ಯನ್ನು ಸಂಪಾದಿಸಿಕೊಳ್ಳಲು ಯಾವ ಸಮಯವನ್ನು ನಾನು ಹೋಗಗೊಡ

ಲಿಲ್ಲ. ವಿಜಾಪೂರಕ್ಕೆ ಬೂಟು ಪಾಟಲೋಣಗಳನ್ನು ಹಾಕಿ ಸಾಹೇಬರ ಟೊಪ್ಪಿಗೆಯನ್ನು ಹಾಕಿಕೊಂಡು ಯಾರಾದರೂ ಹಿಂದುವೇ ಇರಲಿ ಮುಸಲ್ಮಾನನಿರಲಿ ಅಥವಾ ಕ್ರಿಶ್ಚನನಿರಲಿ, ಹಿಂದುಸ್ಥಾನದವನಿರಲಿ ಅಥವಾ ಪರದೇಶದವನಿರಲಿ, ಯೋಗ್ಯನಿರಲಿ, ಅಥವಾ ಅಯೋಗ್ಯನಿರಲಿ, ಬಂದರೆ ತೀರಿತು. ಅವನಿಗೆ ಮಾನಪತ್ರವನ್ನರ್ಪಿಸುವ ಚಳವಳಿಯು ಸುರುವಾಯಿತು. ಮುನಸಿಪಾಲಿಟಿಯವರಂತೂ ಮಾನಪತ್ರವನ್ನು ಕೊಟ್ಟೇ ಕೊಡುವರು; ಇದಲ್ಲದೆ ಹೊಸದಾಗಿ ಜನ್ಮತಾಳಿದ ರಾಜನಿಷ್ಠ ಸಂಘ, ಪಾಟೀಲ ಸಂಘ, ಮುಂತಾದ ಸಂಘಗಳ ವತಿಯಿಂದಾದರೂ ನಾನು ಬ್ರಾಹ್ಮಣೇತರ ಪುಢಾರಿಯೆಂದು ಹೋಗಿ ಸಾಹೇಬರಿಗೆ ಮಾನಪತ್ರವನ್ನು ಕೊಟ್ಟು ಧನ್ಯನಾಗುತ್ತಿದ್ದೆನು. ಒಂದೆರಡು ಮಾನಪತ್ರಗಳನ್ನು ಕನ್ನಡದಲ್ಲಿ ಬರೆಯುತ್ತಿದ್ದರು. ಅದನ್ನು ನನಗೆ ಓದಬೇಕಾದರೆ ಸಾಕು ಬೇಕಾಯಿತು. ಅವತ್ತಿನ ನನ್ನ ಸ್ಥಿತಿ ರಾತ್ರಿ ೨-೪ ತಾಸುಗಳ ಪರ್ಯಂತ ಕೂತಲ್ಲಿಯೇ ಕೂತು ಅದನ್ನು ಪಾಠಮಾಡಿದೆನು. ಮುಂಜಾನೆ ಸ್ವಚ್ಛ ಮುಂಡಣ ಮಾಡಿಸಿಕೊಂಡು, ಗಂಜಿ ವಸ್ತ್ರಗಳನ್ನು ಧರಿಸಿದೆನು. ವಸ್ತ್ರಗಳಿಗೆಲ್ಲ ಸುಗಂಧ ತೈಲವನ್ನು ಹಚ್ಚಿ, ಬಾಯಲ್ಲಿ ಒಂದು ಯಾಲಕ್ಕಿ ಮತ್ತು ಲವಂಗವನ್ನು ಹಾಕಿಕೊಂಡು ಅಂತರ್ಬಾಹ್ಯ ಸುವಾಸಿತನಾದೆನು. ಇಷ್ಟು ತಯಾರಿಯಲ್ಲಿದ್ದರೂ ಕೂತ ಮಾನಪತ್ರವನ್ನು ಓದುವ ಕಾಲಕ್ಕೆ ಕೈಯು ಕಂಪಿಸುತ್ತಿತ್ತು. ಮಾನಪತ್ರವನ್ನು ಓದಿ ಕೆಳಗೆ ಕೂತ ಕೂಡಲೇ ಪ್ರಚಂಡವಾಗಿ ಚಪ್ಪಾಳೆಯನ್ನು ಬಾರಿಸಲಿಕ್ಕೆ ಹತ್ತಿದರು. ನಾನು ಧನ್ಯನಾದೆನು ಇದನ್ನು ನೋಡಲಿಕ್ಕೆ ನನ್ನ ಹಿರಿಯರು ಇಲ್ಲೆಂದು ತಿಳಕೊಂಡು ನನ್ನ ಕಣ್ಣಲ್ಲಿ ನೀರು ಸುರಿಯಲಿಕ್ಕೆ ಆರಂಭಿಸಿದವು. ಸಾಹೇಬರು ನನ್ನನ್ನು ತಮ್ಮ ಹತ್ತರ ಕರೆದು ನನಗೆ ಹಸ್ತಾಂದೋಲನವನ್ನು ಮಾಡಿದರು. ನನ್ನ ಹಸ್ತದ ಭಾಗ್ಯವು ಉದಯಿಸಿತು. ಯಾವ ಬಲಹಸ್ತದಿಂದ ಸಾಹೇಬರ ಸ್ಪರ್ಶವಾಯಿತೋ ಆ ಕೈಯನ್ನು ಕಡಿದು ಅವರ ಪೂಜೆಯನ್ನು ದಿನಾಲು ಮಾಡಬೇಕೆಂದು ಅನಿಸಿತು. ಆದರೆ ಆ ಮೇಲೆ ಎಡಗೈಯಿಂದ ಹೊಗೆಸೊಪ್ಪುಗಳನ್ನು ಸೇದುವ ಕಾಲಕ್ಕೆ ಕಡ್ಡಿಗಳನ್ನು ಕೊರೆಯಲಿಕ್ಕೆ ಬಲಗೈಯು ಅಡಚಣೆಯಾಗಬಹುದೆಂದು, ಆ ಕೈಯನ್ನು ಹಾಗೆ ಅಲ್ಲಿಗೆ ಬಿಟ್ಟೆನು ಇರಲಿ. ನತ್ಯವಾಗಿ ನಾನು ಮಾನಪತ್ರವನ್ನು ಓದಿದ ದಿವಸವೇ ರಾವಬಹಾದ್ದೂರನಾಗಬೇಕಾಗಿತ್ತು. ಆದರೆ ನನ್ನ ದೈವವು ಇನ್ನೂ ಉದಯಿಸಿಲ್ಲ.

೬

## ಮೂದರಿಯ ಮಹತ್ವಾಕಾಂಕ್ಷೆ

ಹೋದವಾರದಲ್ಲಿ ವಿಜಾಪುರಕ್ಕೆ ಮೇಹರಬಾನ ಕಮೀಶನರ ಸಾಹೇಬರು ಬಂದದ್ದರಿಂದ ನನಗೆ ಸ್ವಲ್ಪ ಸಹಿತ ಅವಕಾಶವು ದೊರೆಯಲಿಲ್ಲ. ನಾನು ನನ್ನ ಎಲ್ಲ ವೇಳೆಯನ್ನು ಸಾಹೇಬರ ಭೆಟ್ಟಿಯಲ್ಲಿಯೂ ಅವರು ಹೋದಲ್ಲಿಗೆ ಅವರೊಡನೆ ಹೋಗಿಯೂ ಮತ್ತು ಅವರ ಸಂಗಡ ಫೋಟೋ ತೆಗೆಸಿಕೊಳ್ಳುವದರಲ್ಲಿಯೂ, ಕಳೆದೆನು. ಆದ್ದರಿಂದ ನನ್ನ ಆತ್ಮಚರಿತ್ರೆಯನ್ನು ಬರೆಯುವದರಲ್ಲಿ ನನಗೆ ವೇಳೆಯು ಸಿಗಲಿಲ್ಲ.

ನಾನು ನನ್ನ ಊರಲ್ಲಿದ್ದಾಗ್ಗೆ ತಾಲೂಕಾ ಲೋಕಲಬೋರ್ಡದ ಸಭಾಸದನಿದ್ದೆನು ತಾಲೂಕಿನ ಜಮಾ ಖರ್ಚವು ಅಷ್ಟು ದೊಡ್ಡದಿಲ್ಲದ್ದರಿಂದ ಆದರಲ್ಲಿ ದೊಡ್ಡಸ್ತಿಕೆಯು ಹೊರತು ಎರಡನೆ ಯಾವ ದೃಷ್ಟಿಯಿಂದಲೂ ಲಾಭ ಇದ್ದಿಲ್ಲ. ಅಲ್ಲಿಂದ ತಾಲೂಕ ಲೋಕಲಬೋರ್ಡಿನ ಸಭಾಸದನಾಗುವದು ಕೆಳಗಿನ ತರಗತಿಯದೆಂದು ನನಗೆ ಅನಿಸಲಿಕ್ಕೆ ಹತ್ತಿತು ಸಭಾಸದನಾದರೆ ಜಿಲ್ಲೆಯ ಲೋಕಲಬೋರ್ಡದ ಸಭಾಸದನಾಗಬೇಕೆಂಬ ಮಹತ್ವಾಕಾಂಕ್ಷೆಯಿಂದ ನಾನು ಅದರ ಸಲುವಾಗಿ ಜೋರಿನಿಂದ ಕೆಲಸ ಮಾಡಲಿಕ್ಕೆ ಪ್ರಾರಂಭಿಸಿದೆನು ಮತದಾರ ಜನರಿಗೆ ಹಣವನ್ನು ಕೊಡುತ್ತ ಹೋದರೆ ಕೆಲಸವಾಗದೆಂದು ತಿಳಿದು ಮತ್ತೊಂದು ಯೋಜನೆ ಮಾಡಿದೆನು.

ವಿಜಾಪೂರದ ಸಮೀಪದಲ್ಲಿರುವ ಒಂದು ಸಣ್ಣ ಹಳ್ಳಿಯ ಮಠದಲ್ಲಿ ಒಬ್ಬ ಸ್ವಾಮಿಯು ಇರುತ್ತಿರುವನು ನಿತ್ಯವೂ ಅವರ ಮಠದಲ್ಲಿ ಪುರಾಣವನ್ನು ಕೇಳುವದರ ಸಲುವಾಗಿ ದೊಡ್ಡ ದೊಡ್ಡ ಪ್ರಮುಖ ಜನರು ಬರತ್ತಿರುವರು ನಾನಾದರೂ ಕೂಡ ಆ ಮಠಕ್ಕೆ ಹೋಗಿ ಬರುವ ಪರಿಪಾಠವನ್ನಿಟ್ಟೆನು. ನಾನು ಮಠಕ್ಕೆ ಹೋದ ಕೂಡಲೇ ಒಮ್ಮೆ ಸ್ವಾಮಿಗೆ ನಮಸ್ಕಾರ ಮಾಡುತ್ತಿದ್ದೆನು. ಮತ್ತು ತಿರುಗಿ ಬರುವ ಕಾಲಕ್ಕೆ ಸ್ವಾಮಿಗಳು ಸಾಕು ಅಂದರೂ ಕೂಡ ಹಾಗೆಯೇ ಸ್ವಾಮಿಗಳ ಪಾದಗಳ ಮೇಲೆ ನನ್ನ ಮಸ್ತಕವನ್ನು ಒಂದು ನಿಮಿಷದವರೆಗೆ ಇಡುತ್ತಿದ್ದೆನು. ನನ್ನ ಭಕ್ತಿಯಿಂದ ಸ್ವಾಮಿಗಳು ಚಕಿತರಾದರು. ಮತ್ತು ಉಳಿದ ಜನರಾದರೂ ಆಶ್ಚರ್ಯ ಚಕಿತರಾದರು.

ಒಂದು ದಿವಸ ಸ್ವಾಮಿಗಳು ಒಬ್ಬರೇ ಇದ್ದಾಗ ಹೋಗಿ ನಮಸ್ಕಾರ ಮಾಡಿ ದೀನ ಮುದ್ರೆಯಿಂದ ಅವರ ಕಡೆಗೆ ನೋಡಲಿಕ್ಕೆ ಹತ್ತಿದೆನು. ಮತ್ತು ಮಠದ ಉತ್ಸವಕ್ಕಾಗಿ ೨೦೧ ರೂಪಾಯಿ ಕೊಡುವೆನು. ಅದನ್ನು ನೀವು ಸ್ವೀಕಾರ ಮಾಡಬೇಕೆಂದು ಸ್ವಾಮಿಗಳಿಗೆ ಹೇಳಿದೆನು. ಸ್ವಾಮಿಗಳ ಮುಖ ಮುದ್ರೆಯು ಅರಳಿತು. ನನಗೆ ಅವರು ರೂಪಾಯಿಗಳನ್ನು ಕೇಳದೆ ನೀವು ಯಾಕೆ ಕೊಡುವಿರೆಂದು ವಿಚಾರಿಸಿದರು ನಾನು ಲೋಕಲ್ ಬೋರ್ಡಿನ ಚುನಾವಣೆಗೆ ಉಮೇದ್ವಾರನಾಗಿ ನಿಂತಿರುವೆನು. ಚುನಾವಣೆಯಲ್ಲಿ ನಾನು ಉತ್ತೀರ್ಣನಾಗಬೇಕೆಂದು ತಿಳಿದುಕೊಂಡು ನಿಮ್ಮ ಚರಣಗಳಿಗೆ ಈ ರೂಪಾಯಿಗಳನ್ನು ಅರ್ಪಿಸಿರುವೆನೆಂದು ನಾನು ಅವರಿಗೆ ಹೇಳಿದೆನು. ಸ್ವಾಮಿಗಳು ಶ್ರೀ. ಚನ್ನಬಸವೇಶ್ವರನು ಯಶಕೊಡುವನೆಂದು ನನಗೆ ಆಶೀರ್ವದಿಸಿದರು ಅಲ್ಲಿಂದ ನನ್ನ ಪ್ರಯತ್ನ ಆರಂಭವಾಯಿತು. ಪ್ರತಿಯೊಬ್ಬ ಮತದಾರನನ್ನು ಸ್ವಾಮಿಗಳ ಕಡೆಗೆ ಕರಕೊಂಡು ಹೋಗುತ್ತಿದ್ದೆನು. ಇಲ್ಲವೆ ಸ್ವಾಮಿಗಳನ್ನೇ ಮತದಾರರ ಊರಿಗೆ ಒಯ್ಯುತ್ತಿದ್ದೆನು. ಮತದಾರರಿಗೆ ಸ್ವಾಮಿಗಳ ಪಾದವನ್ನು ಮುಟ್ಟಿ ಆಣೆ ಮಾಡಲಿಕ್ಕೆ ಹೇಳುತ್ತಿದ್ದೆನು. ಕೇವಲ ೨೦೦ ರೂಪಾಯಿಗಳನ್ನು ಮಠಕ್ಕೆ ಕೊಟ್ಟದ್ದರಿಂದ ಇಷ್ಟೇ ಖರ್ಚಿನಿಂದ ನಾನು ಲೋಕಲಬೋರ್ಡಿನ ಸಭಾಸದನಾದೆನು-

ನಮ್ಮ ಮತದಾರ ಜನರು ಅಂಥ ಶ್ರದ್ಧೆಯುಳ್ಳವರು. ಇದರ ಲಾಭ ನನಗೆ ಸಿಕ್ಕಿತು ಸ್ವಾಮಿಗಳು ಹೇಳುವರೆಂದು ತಿಳಕೊಂಡು ಎಲ್ಲ ಜನರು ನನಗೆ ತಮ್ಮ ಮತಗಳನ್ನು ಕೊಟ್ಟರು. ಈ ತಮ್ಮ ಸ್ವಭಾವವನ್ನು ಯಾವ ದಾದರೊಂದು ಉತ್ತಮ ಕೆಲಸದಲ್ಲಿ ತೊಡಗಿಸಿದ್ದರೆ ಕ್ಷಣದಲ್ಲಿ ಅವರು ಉದ್ಧಾರವಾಗುತ್ತಿದ್ದರು. ಇರಲಿ. ಅವರ ಉದ್ಧಾರ ಗೊಡವೆಯು ನವಗೇಕೆ ? ನನ್ನ ಉದ್ಧಾರವಾದರೆ ತೀರಿತು.

ಈ ತರದ ಪ್ರಯತ್ನವನ್ನು ಈ ಸಾರೆ ಯಾದರೂ ಮಾಡಿದ್ದರಿಂದ ಜಿಲ್ಹಾ ಲೋಕಲ ಬೋರ್ಡದ ಸಭಾಸದನಾದೆನು. ಈ ಸಾರೆಯ ಬೋರ್ಡಿನ ಅಧ್ಯಕ್ಷರ ಚುನಾವಣೆಯು ಕಾಲಕ್ಕೆ ನನಗಾದರೂ ಕೂಡ ನಾಲ್ಕು ದುಡ್ಡುಗಳು ದೊರೆತವು. ನಾನು ಲೋಕಲ ಬೋರ್ಡದಲ್ಲಿದ್ದಾಗ್ಗೆ ನನ್ನ ಆಪ್ತ ಇಷ್ಟರಿಗೆ ಮೇಸ್ತ್ರಿ, ಮುಕಾದನು, ಮಾಸ್ತರ ಮುಂತಾದ ಹಲ ಕೆಲವು ದೊಡ್ಡ ದೊಡ್ಡ

ಜಾಗೆಗಳು, ದೊರೆಯಲಿಕ್ಕೆ ಹತ್ತಿದವು. ಎಲ್ಲ ಕಡೆಯಲ್ಲಿಯೂ ಬಸವಂತ ರಾಯರ ಜಯಘೋಷವಾಗಲಿಕ್ಕೆ ಹತ್ತಿತು. ನಾನು ಲೋಕಲ ಬೋರ್ಡದ ಕಾಯಿದೆಯ ಅಭ್ಯಾಸ ಕ್ರಮವನ್ನಿಟ್ಟೆನು. ನೌಕರ ಜನರ ನೆಮಣೂಕಿಯಲ್ಲಿ ಮತ್ತು ಕಂತ್ರಾಟದಂಥ ಅನೇಕ ಕೆಲಸಗಳಲ್ಲಿ ಪ್ರಯತ್ನ ಮಾಡಿದರೆ ಬೇಕಾದಷ್ಟು ಹಣವು ದೊರೆಯಬಹುದೆಂದು ನನಗೆ ಅನಿಸಲಿಕ್ಕೆ ಹತ್ತಿತು. ಇದರ ಲಾಭವನ್ನು ನನ್ನ ಶಕ್ತ್ಯನುಸಾರ ಅನುಭವಿಸುತ್ತಿದ್ದೆನು. ಆದರೆ ಈಗ ನನ್ನ ಕೆಲಸವು ಯಥಾಪ್ರಕಾರ ನಡೆದಿರುವದು. ಖರ್ಚಿನ ಅಡಚಣಿಯು ನನಗೆ ಯಾವ ತರದ್ದೂ ಇಲ್ಲ. ಆದರೆ ಪ್ರಕೃತಿಯ ಅಸ್ವಸ್ಥತೆಯು ನನಗೆ ಇರುವದು. ನನಗೆ ಈಗ ೫೦ ವರ್ಷಗಳಾದವು. ನಾನು ಈಗ ಮುಪ್ಪಿನವನಾಗಲಿಕ್ಕೆ ಹತ್ತಿದೆನು. ರಾವಸಾಹೇಬನಾಗುವದಕ್ಕಿಂತ ಪೂರ್ವದಲ್ಲಿಯೇ ನಾನು ಸಾಯುವೆನೆಂದು ನನಗೆ ಭೀತಿಯುಂಟಾಗಿರುವದು. ಶ್ರೀ. ಚನ್ನಬಸವೇಶ್ವರರ ಕೃಪೆಯಿಂದಾದರೂ ಮೃತವಾಗುವದಕ್ಕಿಂತ ಪೂರ್ವದಲ್ಲಿಯೇ ನಾನು ರಾವ ಸಾಹೇಬನಾದರೆ ಒಳ್ಳೇದು.

೭

## ದೃಶ್ಯ ಫಲವು ಕೈಸೇರಲೊಲ್ಲದು

ತಮ್ಮ ಅಡಿಗೆ ನಾನು ಆಗಾಗ್ಗೆ ಕಳುಹಿದ ಪತ್ರಗಳ ಮೇಲಿಂದ ತಮಗೂ ಮತ್ತು ತಮ್ಮ ವಾಚಕ ಗಣಕ್ಕೂ ನಾನು ರಾವಸಾಹೇಬ ಪದವಿಗೆ ಯೋಗ್ಯನಿದ್ದ ಬಗ್ಗೆ ತಿಳಿದಿರಲಿಕ್ಕೆ ಸಾಕು. ಈ ಒಂದು ಪದವಿಯ ಆಶೆಗೆ ಬಿದ್ದು ನಾನು ಎಷ್ಟೋ ಚಲೋ ಕೆಟ್ಟ ಕೆಲಸಗಳನ್ನು ಮಾಡಿದೆನು. ಆದರೆ ಅವುಗಳ ದೃಶ್ಯ ಫಲವು ಈ ವರೆಗೆ ನನ್ನ ಕೈಸೇರಲೊಲ್ಲದು. ಮಾಡುವದೇನು? ಮನಸ್ಸಿಗೆ ಬಹಳ ವ್ಯಸನವಾಗುತ್ತದೆ. ಬ್ರಿಟಿಶರ ರಾಜ್ಯದಲ್ಲಿ ನ್ಯಾಯವಿದೆ ಎಂದು ಹೇಳಲಿಕ್ಕೆ ಬಾರದಂತಾಗಿದೆ. ಕಾನೂನು ಮಂಡಲ ಸೇರಿ ಆರು ವರುಷದ ವರೆಗೆ ಬಾಯಿ ಬಿಚ್ಚದೆ, ಕೇವಲ ಸರಕಾರಕ್ಕೆ ಅನುಕೂಲವಾಗಿ ಮತ ಕೊಟ್ಟವರಿಗೆ 'ರಾವಸಾಹೇಬ' 'ರಾವಬಹಾದ್ದೂರ' ಪದವಿಯು ದೊರೆಯುವದು. ಆದರೆ ಹಗಲಿರುಳು ಅಧಿಕಾರಿಗಳ ಮುಂದೆ ಕೈಜೋಡಿಸಿ

ನಿಂತವರಿಗೆ ಯಾವ ಪದವಿಯು ದೊರೆಯುವದಿಲ್ಲವಲ್ಲ! ಈ ಸಂಗತಿಯ ಅರ್ಥವೇ ನನಗೆ ತಿಳಿಯದಂತೆ ಆಗಿದೆ.

ಸದ್ಯಕ್ಕೆ ನಮ್ಮ ಜಿಲ್ಹೆಯನ್ನು ಆಳುವ ಕಲೆಕ್ಟರ ಸಾಹೇಬರು ನಮ್ಮ ಜ್ಞಾತಿಬಾಂಧವರಿದ್ದು ಅವರ ಆಳಿಕೆಯಲ್ಲಿಯಾದರೂ ನನಗೆ ಪದವಿದಾನವಾಗುವದೆಂದು ಆಶೆ ಇತ್ತು. ನನ್ನದೂ ಕಲೆಕ್ಟರರದೂ ಬಹಳ ಸ್ನೇಹ, ಋಣಾನುಬಂಧವಿದೆ. ನಾನು ಅವರ ಭೆಟ್ಟಿಗೆ ಹೋದಾಗ್ಗೆ ಎಷ್ಟೋ ತಾಸುಗಳವರೆಗೆ ನನ್ನೊಡನೆ ಅವರು ಮಾತನಾಡುತ್ತಾರೆ. ಅವರ ಕೃಪೆಯಿಂದಾದರೂ ಈ ಸಾರೆ ನಾನು ಪದವಿಗೆ ಪಾತ್ರನಿದ್ದ ಬಗ್ಗೆ ತಿಳಿಸಿದ್ದರೆಂದು ಕೇಳಿದೆ. ನನ್ನ ದುರ್ದೈವದಿಂದ ಕಲೆಕ್ಟರ ಸಾಹೇಬರು ಸಾಹೇಬರಂತೆ, ಉಡುಪುಗಳನ್ನು ಧರಿಸಿದರೂ, ದೇಶೀ ಸಾಹೇಬರಿದ್ದ ಮೂಲಕ, ಜಾತಿಯಿಂದ ಸಾಹೇಬರ ಶಿಫಾರಸದಂತೆ, ಇವರ ಶಿಫಾರಸಕ್ಕೆ ದೊಡ್ಡ ಸರಕಾರದಲ್ಲಿ ಮನ್ನಣೆ ಇಲ್ಲದ್ದನ್ನು ಮನಗಂಡೆನು. ಕಲೆಕ್ಟರ ಸಾಹೇಬರ ದಾರಿಬಿಟ್ಟು ಎತ್ತ ಹೋಗಬೇಕೆಂಬ ವಿಚಾರ ಮಾಡುವಾಗಲೇ ಮೇಹರಬಾನ ಕಮಿಶನರ ಸಾಹೇಬ ಬಹಾದ್ದೂರರವರ ಪಾದಧೂಳಿಯು ವಿಜಾಪುರದಲ್ಲಿ ಬಿತ್ತು. ಅವರ ಭೆಟ್ಟಿಯ ಸಲುವಾಗಿ ನಾನು ಹೊಸ ಪೋಷಾಕ ಮಾಡಿಸಿದೆ; ಬೂಟಿಗೆ ಅಚ್ಚಾದ ಕೊಬ್ರಾ ಬೂಟಪಾಲಿಸ ತಿಕ್ಕಿಸಿದೆ. ಬಿಳಿ ಮೀಶೆಗಳಿಗೆ ದಟ್ಟ ಕರೇ ಕಲಪು ಹಚ್ಚಲಿಕ್ಕೆ ನಾನು ಮರೆಯಲಿಲ್ಲ. ರಾಮಯ್ಯನನ್ನು ಕರೆತಂದು ಎದುರುಗಟ್ಟಿ ಮಾಡಿಸಿ, ಸರ್ವ ತಯಾರಿ ಮಾಡಿಕೊಂಡು ಸಲಾಮು ವಗೈರೆ ಹೇಗೆ ಮಾಡಬೇಕು, ಅವರ ಮಾತು ತಿಳಿದಿದ್ದರೂ ಹೇಗೆ ನಗಬೇಕು ಇದನ್ನೆಲ್ಲ ಕೇಳಿಕೊಂಡು ಸಾಹೇಬರ ಭೆಟ್ಟಿಗೆ ಹೋದೆ. ನನಗೆ ಇಂಗ್ರೇಜೀ ಬರದೇ ಇದ್ದ ಮೂಲಕ ಸಾಹೇಬರಿಗೆ ನನ್ನ ಭೆಟ್ಟಿಯ ಕಾರಣ ಕನ್ನಡದಲ್ಲಿ ಹೇಳಿಕೊಂಡು ಮತ್ತು ಬದಿಯಲ್ಲಿದ್ದ ಕಾರಕೂನನ ಕಡೆಯಿಂದ ಅದರ ಅರ್ಥವನ್ನು ಸಾಹೇಬರಿಗೆ ತಿಳಿಸಿದೆ. 'ರಾವಸಾಹೇಬ' ಪದವಿಯನ್ನು ದೊರಕಿಸಲಿಕ್ಕೆ ಬಂದಿದ್ದೇನೆಂದು ಹೇಳಿದ ಕೂಡಲೇ ಸಾಹೇಬ ಬಹಾದ್ದೂರರವರು ಫೂಲ್, ಫೂಲ್ (Fool Fool) ಎಂದು ಒದರಿದ್ದರಿಂದ ಅವರಿಗೆ ಸಂತೋಷವಾಗಿದೆ ಎಂದು ತಿಳಿದೆ. ಹದಿನೆಂಟು ವರುಷದ ನನ್ನ ಮಗನು ಇಂಗ್ರೇಜಿ ಕಲಿಯುತ್ತಲಿದ್ದಾನೆ. ಅವನಿಗೆ ಆ ಶಬ್ದದ ಅರ್ಥವನ್ನು ಕೇಳಿದೆ. ಆದರೆ " ಫೂಲ ಇದರ ಅರ್ಥ " ಮೂರ್ಖ ಅಂತ

ತಿಳಿಯಿತು. ಆದರೂ ನನಗೆ “ ರಾವಸಾಹೇಬ ಪದವಿ ದೊರಕಲಿಕ್ಕೆ ಅಡಿ ಆಗುವದಿಲ್ಲ. ‘ ರಾವ ಸಾಹೇಬ ರಾವಬಹಾದ್ದೂರ ಆದವರೆಲ್ಲರೂ ಬಹುತರ ವಾಗಿ ನನ್ನ ವರ್ಗದಲ್ಲಿರುವದರಿಂದ ನಾನಾದರೂ ರಾವಸಾಹೇಬನಾಗಲಿಕ್ಕೆ ಅಡ್ಡಿ ಇಲ್ಲವೆಂದು ಸಮಾಧಾನ ಮಾಡಿಕೊಂಡೆ.

ಎಷ್ಟೋ ಗುಪ್ತ ರೋಗಗಳು ನನ್ನಲ್ಲಿ ಮನೆಮಾಡಿಕೊಂಡಿರುವದರಿಂದ ನನಗೆ ಈ ಪದವಿಯು ಆದಷ್ಟು ತೀವ್ರ ದೊರೆಯಬೇಕಾಗಿದೆ. ಯಾಕಂದರೆ ಒಮ್ಮಿಂದೊಮ್ಮೆಲೇ ಎದೆಬೇನೆಯಿಂದ ಕೈಲಾಸಕ್ಕೆ ಎಲ್ಲಿ ತೆರಳುವೆನೋ ಎಂಬ ಬಲವಾದ ಶಂಕೆಯು ನನ್ನಲ್ಲಿ ಹುಟ್ಟಿದೆ. ಆದ್ದರಿಂದ ಟಾಂಗಾದಲ್ಲಿ ತಿರುಗಾಡು ತ್ತೇನೆ ಹತ್ತರ ಔಷಧದ ಬಾಟ್ಲಿಯನ್ನು ಇಟ್ಟುಕೊಂಡಿರುತ್ತೇನೆ. ಇಷ್ಟಾಗಿ ಶಿವನ ಮನಸ್ಸಿನಲ್ಲಿ ನನ್ನನ್ನು ಕೈಲಾಸಕ್ಕೆ ಅಟ್ಟಬೇಕೆಂದು ಇದ್ದರೆ ನನ್ನದೇನು ಉಪಾ ಯವಿದೆ. ಕಳೆದ ನಾಲ್ಕಾರು ವರುಷಗಳಿಂದ ಹೊಲಗಳು ಬೆಳೆದಿಲ್ಲ. ಹೊಲ ಗಳು ಒತ್ತೀ ಬಿದ್ದಿವೆ ಅಡತಿ ಅಂಗಡಿ ದಿವಾಳಿ ಹೊರಡುವ ಪ್ರಸಂಗ ಬಂದಿದೆ. ನಾನು ಮೆಂಬರನಿದ್ದ ಮೂಲಕ ಕೈ ಮೇಲೆ ಹೊಟ್ಟೆ ತುಂಬಿಕೊ ಳ್ಳುತ್ತೇನೆ. ಈ ಕಾಲದಲ್ಲಿ ನಾನು ದೇಹವಿಡುವದು ಯೋಗ್ಯವೆ. ಆದರೆ ‘ ರಾವಸಾಹೇಬ ’’ ಪದವಿ ಇಲ್ಲದೆ ಸಾಯಬೇಕಾಗುವದರಿಂದ ಬಹಳ ವ್ಯಸನ ಪಡುತ್ತೇನೆ. ಸರಕಾರದವರು ಪದವೀದಾನ ಸಮಾರಂಭದಲ್ಲಿ ಸಹ ಕೃಪಣತನ ಮಾಡುತ್ತಾರೆ. ಎಲ್ಲಮ್ಮನ ಪ್ರಸಾದದಂತೆ ಪ್ರತಿವಾರ ಪದವೀದಾನ ಮಾಡುವ ದರಿಂದ ಸರಕಾರದವರದೇನೂ ಹಾನಿ ಇರುವದಿಲ್ಲ. ಈ ವಾರದಲ್ಲಿ ನನಗೆ ಪದವಿ ದೊರೆಯದೇ ಹೋದರೆ ನನ್ನ ಗತಿ ನೆಟ್ಟಗಿಲ್ಲ. ನಿಮ್ಮ ಪತ್ರದ್ವಾರಾ ನಾನು ಸರಕಾರಕ್ಕೆ ಒಂದು ರೀತಿಯಿಂದ ನೋಟೀಸು ಕೊಡುತ್ತೇನೆ. ನಾನು ‘ ರಾವಸಾಹೇಬ ’ ‘ ರಾವಸಾಹೇಬ ’ ಅಂತ ಪ್ರಾಣ ಬಿಟ್ಟರೆ ಅದಕ್ಕೆ ಸರಕಾರ ದವರೇ ಹೊಣೆಗಾರರು.

ಸಂಪಾದಕ ಮಹಾಶಯರೇ, ಈ ಪತ್ರ, ಕೊನೆಯದು. ತಾವು ನನ್ನ ದೂರನ್ನು ಜನರ ಮುಂದೆ ಮತ್ತು ಸರಕಾರದವರ ಮುಂದೆ ಇಡಲಿಕ್ಕೆ ಅವಕಾಶ ಕೊಟ್ಟ ಬಗ್ಗೆ ನಾನು ಬಹಳ ಋಣಿಯಾಗಿದ್ದೇನೆ. ನಾನು ಬೇರೆ ಕಡೆಗೆ ಕಳಿಸಿದ್ದರೆ ದುಡ್ಡು ಬೇಡುತ್ತಿದ್ದರು.

## ೮

## ಅಪಾರವಾದ ಅನರ್ಥ

ವಿಜಾಪೂರ ಪಟ್ಟಣದಲ್ಲಿ ಅಬಾಲ ವೃದ್ಧರಿಗೂ ಗೊತ್ತಿಂದ್ದಥ ರಾಜ ಶ್ರೀ. ಬಸವಂತರಾಯಾ ಇವರ ಆಕಸ್ಮಿಕ ಮರಣದಿಂದ ನಮಗಾದ ದುಃಖದಷ್ಟೇ ನಮ್ಮ ವಾಚಕರಿಗೂ ಆಗಿರುವದರೆಂಬದರಲ್ಲಿ ಸಂದೇಹವಿಲ್ಲ. ಅವರ ಮರಣದ ಸಂಗತಿಯಾದರೂ ಅವರ ಚರಿತ್ರದಂತೆ ಬೋಧ ಪ್ರದವಿರುವದರಿಂದ ಅದನ್ನು ಅವರ ಮಗನ ಶಬ್ದದಲ್ಲಿ ಕೆಳಗೆ ಕೊಡುತ್ತೇವೆ.

## ರಾ. ಕರ್ನಾಟಕ ವೈಭವದ ಸಂಪಾದಕರಿಗೆ

ವಿ. ವಿ. ನಮ್ಮ ತಂದೆಯಾದ ಶ್ರೀಮಂತ ಬಸವಂತರಾಯಾ ತಿಮ್ಮಣ ಗೌಡಾ ಪಾಟೀಲ ಇರುವ ಊರು ಹುಚನೂರು ಆನರರಿ ಬೆಂಚ ಮಾಜಿಸ್ಟ್ರೇಟ ಮೊದಲನೇ ವರ್ಗ, ಮೆಂಬರ ಜಿಲ್ಹಾ ಲೋಕಲಬೋರ್ಡ, ಬ್ಲಾಯಿಂಡ ರಿಲೀಫ ಆಸೋಸಿಯಶೇನ, ಉಪಾಧ್ಯಕ್ಷ ಜಿಲ್ಹಾ ಪಾಟೀಲ ಸಂಘ, ಅಧ್ಯಕ್ಷ ಬ್ರಾಹ್ಮಣೇತರ ಸಂಘ, ಅಗ್ಗದ ಸಾಯಿದ ( ಆನರರಿ ಆರ್ಗನಾಯಿಝರ ) ಸಹಕಾರೀ ಸಂಘ ಕಾರ್ಯದರ್ಶಿ ತಾಲೂಕ ಡೆವಲಪ್‌ಮೆಂಟ ಆಸೋಶಿಯೇಶನ್ ವಗೈರೆ ಇವರು ತಾರೀಖು ೨೫ನೇ ಮಾರ್ಚ ದಿವಸ ಬೆಳಿಗ್ಗೆ ೮ ಘಂಟೆಗೆ ಶಿವನ ಕಡೆಯಿಂದ ಆಜ್ಞಾ ಬದದ್ದರಿಂದ ಕೈಲಾಸಕ್ಕೆ ತೆರಳಿದರು. ಸುಮಾರು ಒಂದು ತಿಂಗಳಿಂದ ಅವರ ಪ್ರಕೃತಿಯು ಚನ್ನಾಗಿದ್ದಿಲ್ಲ. ಯಾವದೋ ಒಂದು ವಸ್ತುವಿನ ಸಲುವಾಗಿ ಹೃದ್ರೋಗವು ಉಂಟಾಗಿತ್ತು. ಮುನಸಿಪಾಲಟಿ ಮತ್ತು ಲೋಕಲಬೋರ್ಡದವರು ಮಹಾತ್ಮಾ ಗಾಂಧಿಯವರಿಗೆ ಮಾನಪತ್ರ ಕೊಡಬೇಕೆಂದು ಠರಾವು ಪಾಸು ಮಾಡಿದ್ದರಿಂದ ಅವರ ಎದೆಗೆ ಧಕ್ಕೆ ತಗಲಿತೆಂದು ತೋರುತ್ತದೆ. ಸಾಯುವವರೆಗೆ ಅವರು ಎಚ್ಚರವಿದ್ದರು. ಸಾಯುವದಕ್ಕಿಂತ ೫ ಮಿನಿಟು ಮೊದಲು ನನ್ನನ್ನೂ ನನ್ನ ತಾಯಂದಿರನ್ನೂ ಕರೆದು ಮೃತ್ಯುಪತ್ರದಲ್ಲಿ ಬರೆದಂತೆ ನಡೆಯಲಿಕ್ಕೆ ಆಜ್ಞಾಪಿಸಿದರು. ನಾವು ಅಳುತ್ತ ನಿಂತಿರುವಾಗ ರಾವಸಾಹೇಬ, ರಾವಸಾಹೇಬ ಅನ್ನುತ್ತ ಪ್ರಾಣಬಿಟ್ಟರು. ಮೃತ್ಯುಪತ್ರವನ್ನು

ಒಂದು ಪಾಕೀಟಿನಲ್ಲಿ ಹಾಕಿ ಇಟ್ಟಿದ್ದರು. ಅವರ ಹೇಳಿಕೆಯ ಪ್ರಕಾರ ಆ ಮೃತ್ಯುಪತ್ರವನ್ನು ಪ್ರಸಿದ್ಧ ಮಾಡುವ ಕುರಿತು ನಿಮ್ಮ ಕಡೆಗೆ ಕಳಿಸುತ್ತಿದ್ದೇನೆ. ತಾವು ಅದನ್ನು ಪ್ರಸಿದ್ಧ ಮಾಡುವಿರೆಂದು ಆಶಿಸುತ್ತೇನೆ.

ತಮ್ಮ ಕೃಪಾಭಿಲಾಷಿ
ಬಸಲಿಂಗರಾವ ಬಸವಂತರಾಯಾ ಬಿಂದಾರ ಪಾಟೀಲ

## ಮೃತ್ಯುಪತ್ರ

ಮೃತ್ಯುಪತ್ರ ಬೇಸ್ಕಿ ಬಸವಂತರಾಯಾ ಬಿನ್ನ ತಿಮ್ಮಣಗವಡಾ ಪಾಟೀಲ ಸಾ. ಹುಚನೂರ ಹಲ್ಲಿವಸ್ತಿ ವಿಜಾಪುರ ಜಾತಿ ಲಿಂಗಾಯತರಡ್ಡೀ ವಯ ೫೫, ಧಂದೆ ವ್ಯಾಪಾರ, ಮುಖ್ಯತಃ ಬೆಂಚ ಮ್ಯಾಜಿಸ್ಟ್ರೇಟ. ಹೀಗೆ ಮೃತ್ಯುಪತ್ರ ಬರೆದಿರುತ್ತೇನೆ. ನಾನು ರಾವಸಾಹೇಬನಾಗದ್ದರಿಂದ ನನ್ನ ರೋಗವು ಹೆಚ್ಚಾಗಿ ಕ್ಷೀಣವಾಗಹತ್ತಿದ್ದೇನೆ. ಯಾವಾಗ ಕೈಲಾಸಕ್ಕೆ ಹೋಗುವೆನೆಂಬದು ನಿಯಮವಿಲ್ಲ. ನನ್ನ ಮರಣದ ನಂತರ ನನ್ನ ಆಸ್ತಿಯ ಸಲುವಾಗಿ ಕೋರ್ಟ ಕಚೇರಿಗೆ ಹೋಗುವ ಪ್ರಸಂಗ ಬರಬಾರದು. ಮತ್ತು ನನ್ನ ಆಯುಷ್ಯದಿಂದ ನನ್ನ ಮಕ್ಕಳು ಬೋಧ ತೆಗೆದುಕೊಳ್ಳಬೇಕೆಂದು ಈ ಮೃತ್ಯುಪತ್ರವನ್ನು ಬರೆದಿಡುತ್ತೇನೆ.

## ಪದವಿ ಮತ್ತು ಸರ್ಟಿಫಿಕೇಟ

ನಾನು ರಾವಸಾಹೇಬ ಪದವಿ ಸಲುವಾಗಿ ಬಹಳ ಪ್ರಯತ್ನ ಮಾಡಿದೆನು. ಆದರೆ ಆ ಪದವಿಯು ವೇಳೆಗೆ ಬರಲಿಲ್ಲ. ತಥಾಪಿ ನಾನು ಕೈಲಾಸವಾಸಿಯಾದ ಎಂಟು ದಿವಸಗಳಲ್ಲಿ ರಾವಸಾಹೇಬ ಪದವಿಯು ಸಿಕ್ಕರೆ ನನ್ನನ್ನು ಸಮಾಧಿಯ ಹೊರಗೆ ತೆಗೆದು ನನ್ನ ಕೊರಳೊಳಗೆ ಆ ಪದಕವನ್ನು ಕಟ್ಟಬೇಕು. ಒಂದು ವೇಳೆ ೮ ದಿವಸಗಳೊಳಗೆ ಬರದಿದ್ದರೆ ವಿಜಾಪುರ ಶಹರದಲ್ಲಿರುವ ಹೆಣ್ಣು ಹುಡುಗರ ಸಾಲೆ, ಫೌಜದಾರ ಕಚೇರಿ ಲಾಯಬ್ರರಿ ಇವುಗಳ ಮಧ್ಯದಲ್ಲಿರುವ ಕಂದೀಲ ಕಂಬಕ್ಕೆ ತೂಗಹಾಕಬೇಕು, ನನ್ನ ಮರಣದಿಂದ ಒಂದು ವರುಷದ ವರೆಗೆ ಕಲೆಕ್ಟರ ಸಾಹೇಬರಿಗೆ ಊರೊಳಗಿನ

ಚಾಡಿ ಹೇಳುತ್ತಾರೋ ಮತ್ತು ಕಲೆಕ್ಟರ ಸಾಹೇಬರು ಆ ವಿಷಯವಾಗಿ ಸರ್ಟಿಫಿಕೇಟ ಕೊಡುತ್ತಾರೋ ಅವನಿಗೆ ಈ ರಾವಸಾಹೇಬ ಪದವಿ ಯನ್ನು ಕೊಡಬೇಕು. ವಾರಲೋನ, ರಿಕ್ರುಟ ಫಂಡು, ಕುರುಡರ ಫಂಡು, ಮೊದಲಾದ ಅನೇಕ ಕೃತ್ಯಗಳನ್ನು ಮಾಡಿದ್ದರಿಂದ ಸಾಹೇಬ ಜನರು ನನಗೆ ಎಂಟು ಸರ್ಟಿಫಿಕೇಟ ಕೊಟ್ಟಿರುತ್ತಾರೆ. ನನ್ನ ಮಗನಿಗೆ ಅವುಗಳ ಉಪಯೋಗ ವಿಲ್ಲ ಅವುಗಳನ್ನು ಜಿಲ್ಹಾ ಲೋಕಲ ಬೋರ್ಡದ ಸರಕಾರ ನಿಯುಕ್ತ ಒಬ್ಬ ಹಿಂದೀ ಮತ್ತು ಮುಸಲ್ಮಾನ ಸಭಾಸದರಲ್ಲಿ ಹಂಚಿ ಕೊಡಬೇಕು. ನಾನು ಎಷ್ಟೋ ಸಾಹೇಬರ ಕೂಡ ಫೋಟೊ ತೆಗೆಸಿಕೊಂಡ ಪ್ರತಿಗಳಿರುತ್ತವೆ ಅವುಗಳನ್ನು ಶಿಪರ್ಡ ಹಾಲದಲ್ಲಿ ನನ್ನ ಸ್ಮರಣಾರ್ಥ ತೂಗಹಾಕಬೇಕು. ಎಲ್ಲ ಫೋಟೊಗಳನ್ನು ಏಕತ್ರ ಮಾಡುವದರಿಂದ ಜಿಲ್ಹೆಯೊಳಗಿನ ರಾಜನಿಷ್ಠ ಜನರ ಯಾದಿಯನ್ನು ಮಾಡಲಿಕ್ಕೆ ಉಪಯೋಗ ಬೀಳುವದು.

ನನ್ನ ಪದಕ ಮತ್ತು ಸರ್ಟಿಫಿಕೇಟಗಳು ಎಷ್ಟು ಮಹತ್ವದ್ದಿರುತ್ತ ವೆಯೋ ಅಷ್ಟೇ ನನ್ನ ಪೋಷಾಕವಾದರೂ ಮಹತ್ವದ್ದಿರುತ್ತದೆ. ನನ್ನ ಕೋಟ ಪಾಟಲೋಣ ನನ್ನ ಹುಡುಗನಿಗೆ ನಿರುಪಯೋಗಿ ಇರುತ್ತವೆ ಆದರೆ ಬಹಳ ಹಣವನ್ನು ವೆಚ್ಚ ಮಾಡಿ ತಯಾರ ಮಾಡಿಸಿದ ಅಂವೆಗಳನ್ನು ವ್ಯರ್ಥವಾಗಿ ಚಲ್ಲುವದು ಯೋಗ್ಯವಲ್ಲ. ನನ್ನ ಎಲ್ಲ ಪೋಷಾಕ ಮುನಸಿಪಾಲಿಟಿಯಲ್ಲಿ ಡತಕ್ಕದ್ದು. ಮತ್ತು ದೊಡ್ಡ ದೊಡ್ಡ ಸಾಹೇಬರಿಗೆ ಮುನಸಿಪಾಲಿಟಿಯವರು ಮಾನಪತ್ರ ಕೊಡುವಾಗ ಮುನಸಿಪಾಲಿಟಿಯ ಬಡ ಮೆಂಬರರಿಗೆ ಚಲೋ ಪೋಷಾಕ ಮಾಡಿಸುವದಾಗುವದಿಲ್ಲ. ಆದ್ದರಿಂದ ಅಂಥ ಬಡ ಮೆಂಬರರಿಗೆ ನನ್ನ ಪೋಷಾಕವನ್ನು ಬಾಡಗಿಯಿಂದ ಕೊಟ್ಟು ಆ ಬಾಡಗಿ ಹಣವನ್ನು ಮುನಸಿಪಾಲಿಟಿಯ ಸಭೆಯು ನಡೆದಾಗ ಮೆಂಬರರಿಗೆ ಬೀಡಿ, ಕಡ್ಡಿ, ಚುಟ್ಟಾ ಮೊದಲಾದವುಗಳನ್ನು ಪೂರೈಸುವದಕ್ಕೆ ಉಪಯೋಗಿಸಬೇಕೆಂದು ಇಚ್ಛೆ ಇರುತ್ತದೆ. ಈ ಇಚ್ಛೆಯನ್ನು ಕೈಗೂಡಿಸಲಿಕ್ಕೆ ಶ್ರೀ. ಚನ್ನಬಸವೇಶ್ವರನು ಸಮರ್ಥನಿದ್ದಾನೆ.

## ನನ್ನ ಹೆಂಡಂದಿರು

ಮನೆಯ ಸಂಬಂಧಿ ಬರೆಯಬೇಕಾದರೆ ನನ್ನ ಕೈ ಥರಥರ ನಡಗುತ್ತದೆ. ಇಬ್ಬರು ಹೆಂಡಂದಿರನ್ನು ಮಾಡಿಕೊಂಡದ್ದರಿಂದ ಮನೆಯಲ್ಲಿಯ ಜಗಳವನ್ನು

ತೀರಿಸುವದರಲ್ಲಿ ನನ್ನ ವೇಳೆಯು ಹೋಗಹತ್ತಿತ್ತು. ನನ್ನ ಮೊದಲನೇ ಹೆಂಡತಿಯ ಹೆಸರು ಯಲ್ಲಿ. ಎರಡನೇ ಹೆಂಡತಿಯ ಹೆಸರು ಪಾರ್ವತಿ. ಯಲ್ಲಿಯ ಹೊಟ್ಟೆಯಿಂದ ಒಬ್ಬ ಮಗನಿದ್ದಾನೆ. ಆದರೆ ನನ್ನಂತೆ ನಾಲ್ಕು ಜನ ಸಂಭಾವಿತರ ಆಗ್ರಹದಿಂದ ಮತ್ತು ಸ್ವಾಮಿಗಳ ಆಜ್ಞೆಯ ಮೇರೆಗೆ ಪಾರ್ವತಿಯನ್ನು ಉಡಕಿ ಮಾಡಿಕೊಂಡೆನು. ಆಕೆಯಿಂದಲೂ ಒಬ್ಬ ಮಗ ನಿದ್ದಾನೆ. ನಾನು ಜೀವಂತ ಇದ್ದಾಗ ಹೇಗಾದರೂ ಮಾಡಿ ಹೆಂಡಂದಿರ ಜಗಳವನ್ನು ಮುರಿಯುತ್ತಿದ್ದೆನು. ಆದರೆ ನಾನು ಸತ್ತ ಮೇಲೆ ಅವರೀರ್ವರು ಟಗರಿನಂತೆ ಹೊಡೆದಾಡುವರೆಂದು ನನಗೆ ಪೂರ್ಣ ಮನವರಿಕೆ ಅದೆ. ಪಾರ್ವತಿ ತರುಣ ಇದ್ದು ಸುಂದರ ಇದ್ದಾಳೆ. ಆಕೆಯನ್ನು ಉಡಕಿ ಮಾಡಿಕೊಳ್ಳಲಿಕ್ಕೆ ಯಾರಾದರೂ ಒಪ್ಪಬಹುದು. ನಾನು ಸತ್ತ ಮೇಲೆ ಯಲ್ಲಿಯ ಗೂಡ ಹೊಡೆದಾಡುತ್ತ ಅನಾಚಾರಿಯಾಗಿ ನನ್ನ ಮನೆಯಲ್ಲಿರುವದಕ್ಕಿಂತ ಯೋಗ್ಯ ಎರಡನೇದವನನ್ನು ಉಡಕಿ ಮಾಡಿಕೊಂಡು ಹೋಗುವದು ಚಲೋದು ನನ್ನ ಮರಣದ ನಂತರ ಆಕೆಯು ಒಂದು ವರುಷದೊಳಗೆ ಉಡಕಿ ಮಾಡಿ ಕೊಂಡು ಹೋದರೆ ಆಕೆಗೆ ಕುಪ್ಪಸ ಸೀರೆಯ ಸಲುವಾಗಿ ಪ್ರತಿ ತಿಂಗಳ ನಾಲ್ಕು ರೂಪಾಯಿ ಆಕೆಗೆ ಕೊಡಬೇಕು. ಆಕೆಯು ಉಡಕಿ ಮಾಡಿಕೊಂಡು ಹೋಗ ದಿದ್ದರೆ ಕೆಳಗಿನ ಪ್ರಕಾರ ವ್ಯವಸ್ಥಾ ಮಾಡಬೇಕು.

ದರವರ್ಷ ಪ್ರತಿಯೊಬ್ಬಳಿಗೆ ನಾಲ್ಕು ಚೀಲ ಜೋಳ ಕೊಡಬೇಕು. ಮತ್ತು ಪ್ರತಿಯೊಬ್ಬರಿಗೆ ಒಂದೊಂದು ಎಮ್ಮೆ ಕೊಡಬೇಕು. ಎಮ್ಮೆಯ ಕಿಮ್ಮತ್ತು ನೂರು ರೂಪಾಯಿ ಬಿದ್ದರೂ ಚಿಂತೆಯಿಲ್ಲ ಆ ಎಮ್ಮೆಯ ಹಾಲು ಮೊಸರು ಮಾರಿಕೊಂಡು ಅವರು ಉಪಜೀವನ ಮಾಡಿಕೊಳ್ಳತಕ್ಕದ್ದು. ಅವರಿಗೆ ಹೊತ್ತು ಹೋಗುವ ಸಲುವಾಗಿ ಒಂದೊಂದು ರಾಟಿ ಕೊಡಬೇಕು. ರಾಟಿ ಯಿಂದ ಅವರಿಬ್ಬರು ನೂಲು ತೆಗೆಯಹತ್ತಿದರೆ ನನ್ನ ಆಸ್ತಿಯೊಳಗಿಂದ ಅವರಿಗೆ ಒಂದೊಂದು ಮಣ ಅರಳಿ ಕೊಡಬೇಕು ನನ್ನ ಹೆಂಡರು ವಿಜಾಪೂರ ಬಿಟ್ಟು ಹುಚನೂರೊಳಗೆ ಹೋಗಿ ಇದ್ದರೆ ಮಾತ್ರ ಅವರಿಗೆ ಈ ಪ್ರಕಾರ ಕೊಡಬೇಕು ಇಲ್ಲದಿದ್ದರೆ ಏನೂ ಕೊಡಬಾರದು. ಅವರ ಮೈ ಮೇಲೆ ಇದ್ದ ವಸ್ತ ಒಡವೆ ಗಳ ಮಾಲಕರು ಅವರೆ ಇದ್ದಾರೆ. ತಮ್ಮ ಮನಸ್ಸಿಗೆ ಬಂದಂತೆ ಅವರು

ಅವುಗಳ ವ್ಯವಸ್ಥೆ ಮಾಡಿಕೊಳ್ಳಬಹುದು. ಸಾಯುವವರೆಗೆ ಅವರು ಅವುಗಳನ್ನು ಇಟ್ಟುಕೊಳ್ಳಬೇಕೆಂದು ನನ್ನ ಶಿಫಾರಸ ಅದೆ. ಆಭರಣಗಳು ಹೋದವೆಂದರೆ ಮುಪ್ಪಿನಲ್ಲಿ ಅವರನ್ನು ಯಾರೂ ಕೇಳುವದಿಲ್ಲ. ಇರಲಿ. ಒಬ್ಬ ಹೆಂಡತಿ ಜೀವಂತ ಇರಲಿಕ್ಕೆ ಎರಡನೇ ಹೆಂಡತಿಯನ್ನು ಮದುವೆ ಅಥವಾ ಉಡಕಿಯನ್ನು ಮಾಡಿಕೊಳ್ಳಬಾರದೆಂದು ನನ್ನ ಅನುಭವದಿಂದ ಬರೆದಿಡುತ್ತೇನೆ ಇಬ್ಬರ ಹೆಂಡರ ಮೂಲಕ ನನಗೆ ತೀವ್ರ ಮರಣ ಬಂದಿತೆಂದು ನನಗೆ ಅನಿಸುತ್ತದೆ. ನನ್ನ ರೋಗ ಅವರಿಗೆ ಹತ್ತಲಿ. ಅಥವಾ ಅವರ ರೋಗ ನನಗೆ ಅಂಟಿಕೊಳ್ಳಲಿ. ನಾನು ಮಾತ್ರ ತೀವ್ರ ಮುಪ್ಪಾದೆನು. ಈ ಪ್ರಕಾರ ಹೆಂಡಂದಿರ ವ್ಯವಸ್ಥಾ ಮಾಡಿದ್ದೇನೆ.

## ಮಕ್ಕಳು

ನಾನು ನಿಮಗಾಗಿ ಏನನ್ನೂ ಮಾಡಿಲ್ಲ. ಮನೆಮಾರುಗಳನ್ನು ಹಾಳು ಮಾಡಿಕೊಂಡು, ರಾವಸಾಹೇಬ ಪದವಿಯ ಅಮೌಲ್ಯಜ್ಞಾನ ನಿಧಿಯನ್ನು ನಿಮಗಾಗಿ, ಇಟ್ಟಿದ್ದೇನೆ. ನನ್ನ ಸಹವಾಸದಿಂದ ನನ್ನ ಚಲೋ ಕೆಟ್ಟ ವ್ಯಸನಗಳು ನಿಮ್ಮ ಸ್ವಾಧೀನವಾಗಿವೆ ಸಾಲಕ್ಕಾಗಿ ಆಸ್ತಿಯನ್ನು ಮಾರಿ ಉಳಿದುದರಲ್ಲಿ ಸಮನಾಗಿ ಹಂಚಿಕೊಳ್ಳಬೇಕು. ಬಸಲಿಂಗರಾಯನು ಆಪತಿಯ ಅಂಗಡಿಯನ್ನೂ ಇನ್ನೊಬ್ಬನು ಹೊಲಮನೆಗಳನ್ನೂ ತೆಗೆದುಕೊಂಡು ಹುಚನೂರಲ್ಲಿ ಇರಬೇಕು —ನನ್ನ ಕೊನೆಯ ಇಚ್ಛೆಯು ಇಷ್ಟೆ. ನೀವು ಮಾತ್ರ ಈ ರಾವಸಾಹೇಬಕೀ ಮಬ್ಬಿಗೆ ಬೀಳಬಾರದೆಂದೂ ಈ ನನ್ನ ಅದ್ಭುತವಾದ ರಾವಸಾಹೇಬಕೀ ಚರಿತ್ರೆಯನ್ನು ಮುದ್ರಿಸಿ ತರುಣರಲ್ಲಿ ಪುಕ್ಕಟೆಯಾಗಿ ಹಂಚಬೇಕು.

ತಮ್ಮ
**ಬಸವಂತರಾಯ—**

# ವಿಧುರ ಮಂಡಲ ಮತ್ತು ಅದರ ಅವಶ್ಯಕತೆಯು



ಕೇವಲ ನೈತಿಕ ಅಥವಾ ಆರ್ಥಿಕ ದೃಷ್ಟಿಯನ್ನಿಟ್ಟು ಯಾವದೊಂದು ರಾಷ್ಟ್ರವು ಅಥವಾ ಸಮಾಜವು ಉನ್ನತಿ ಹೊಂದಿರುತ್ತದೆಂದು ಹೇಳುವದು ಸಮಂಜಸವಾಗಲಾರದು. ಸಮಾಜದ ಅಥವಾ ರಾಷ್ಟ್ರದ ಸ್ವಘಟಕಾವಯುವಗಳು ಸುಸಂಘಟಿತವಿದ್ದರೆ ಮಾತ್ರ, ಅದಕ್ಕೆ ಉಚ್ಚರಾಷ್ಟ್ರ ಅಥವಾ ಸಮಾಜವೆಂದು ಕರೆಯಬಹುದು. ಹಿಂದೀ ಸಮಾಜದ ಸರ್ವವಿಧದ ಬೆಳವಣಿಗೆಯಾಗಬೇಕೆಂದು ಪ್ರಯತ್ನ ನಡೆದಾಗ ಅದರ ಅಂಗಭೂತವಾದ ವಿಧುರ ಸಮಾಜವು ದಿನೇ ದಿನೇ ಬೆಳೆಯಹತ್ತಿದಾಗ್ಯೂ ಅದು ಸುಸಂಘಟಿತವಿಲ್ಲದೆ ವಿಸ್ಖಲಿತವಾಗಿರುವದು ಹಾಸಿಕಾರಕವಿರುತ್ತದೆ. ವಿಧುರ ಸಮಾಜದ ಸ್ಥಿತಿಯು ದಿನದಿನಕ್ಕೆ ಸುಧಾರಿಸುವ ಕುರಿತು ಒಂದು ಮಂಡಳ ಸ್ಥಾಪಿಸುವದು ಎಷ್ಟು ಅವಶ್ಯವಿರುತ್ತದೆಂಬುದು ಮೇಲಿನ ವಿವೇಚನೆಯು ಮೇಲಿಂದ ಸ್ಫುಟವಾಗಿ ಕಂಡು ಬರುವದು. ಇಂಥ ಮಂಡಳದ ಇಷ್ಟು ಅವಶ್ಯಕತೆಯಿದ್ದರೂ ಯಾವ ಪ್ರಾಂತದಲ್ಲಿಯೂ ಈ ಮಂಡಳವು ಸ್ಥಾಪಿತವಾದಂತೆ ತೋರುವುದಿಲ್ಲ. ಇದರ ಮುಖ್ಯ ಕಾರಣವೇನೆಂದರೆ ಜನರ ಔದಾಸಿನ್ಯವು. ನಮ್ಮ ಕರ್ನಾಟಕದ ಕಡೆಗೆ ನೋಡಿರಿ. ಡೇ. ಗಂಗಾಧರರಾವ ದೇಶಪಾಂಡೆ, ಕರ್ನಾಡ ಸದಾಶಿವರಾಯರಂಥ ಹಗಲಿರುಳು ದೇಶದ ಸಲುವಾಗಿ ಕುದಿಯುವ ವಿಧುರಾಗ್ರಣಿಗಳು ನಮ್ಮ ಪ್ರಾಂತದಲ್ಲಿದ್ದರೂ ಒಂದು ಸಣ್ಣ ವಿಧುರ ಮಂಡಳವನ್ನು ಸ್ಥಾಪಿಸಬೇಕೆನ್ನುವದು ಅವರ ಧ್ಯಾನದಲ್ಲಿಲ್ಲದ್ದು ನಮ್ಮ ಸಮಾಜಕ್ಕಿಂತಲೂ ನಮ್ಮ ಪ್ರಾಂತದ ದುರ್ದೈವವೇ ಸರಿ. "ಎಂದೂ ಇಲ್ಲದ್ದಕ್ಕಿಂತಲೂ ತಡವಾದರೂ ಲೇಸು" ಎಂಬ ಇಂಗ್ಲೀಷ ನಾಣ್ಣುಡಿಯಂತೆ ಈಗಾದರೂ ಒಂದು ವಿಧುರ ಸಂಸ್ಥೆ ಸ್ಥಾಪಿಸಿ ವಿಧುರರ ಉದ್ಧಾರ ಮಾಡುವರೆಂಬ ಆಶೆಯಿಂದ ಕೆಲವು ಸೂಚನೆಗಳನ್ನು ಮಹಾಜನರ ಮುಂದೆ ಇಡುತ್ತೇನೆ.

ವಿಧುರ ಮಂಡಳದ ಉದ್ದೇಶವೇನು? ಎಂದು ಕೆಲವರು ಶಂಕಿಸಬಹುದು. ಅನಾಥ ಅಂದರೆ ಅಪತ್ನೀಕ ವಿಧುರರ ಸಂಘಟನೆ ಮಾಡಿ ಅವರ ಸಲುವಾಗಿ ಕುಮಾರಿಯರನ್ನು ಅಥವಾ ವಿವಾಹ ಮಾಡಿಕೊಳ್ಳುವ ಇತರ ಸ್ತ್ರೀಯರ ಶೋಧ ಮಾಡಿ ವಿಧುರರನ್ನು ಸನಾಥ ಇಲ್ಲವೆ ಸಪತ್ನೀಕ ಅಂದರೆ ಸಧುರರನ್ನಾಗಿ ಮಾಡುವದು ಈ ಮಂಡಲದ ಧ್ಯೇಯವಿರಬೇಕೆಂದು ಕೆಲವರು ಒಮ್ಮೆಲೇ ಭಾವಿಸಬಹುದು. ಹಾಗೆ ಮಾಡುವದೆಂದರೆ ತಮ್ಮ ಕಾಲುಗಳ ಮೇಲೆ ತಾವೇ ಕಲ್ಲು ಹಾಕಿಕೊಂಡಂತಾಗುವದು. ಇದು ಆತ್ಮಘಾತವೇ ಸರಿ ಅನೇಕ ಧರ್ಮಗುರುಗಳು ತಮ್ಮ ಶಿಷ್ಯವೃಂದವು ಹೆಚ್ಚಾಗಲೆಂದು ಪ್ರಯತ್ನಪಡುತ್ತಿರುವಾಗ ವಿಧುರರು ಮಾತ್ರ ತಮ್ಮ ಸಂಖ್ಯೆಯು ಕುಗ್ಗುವ ಮಾರ್ಗ ಹಿಡಿಯುವದು ಲಜ್ಜಾಸ್ಪದವಾದೀತು ಆದ್ದರಿಂದ ವಿಧುರರಲ್ಲಿ ಪರಸ್ಪರ ಸಂಘಟನೆಯನ್ನೂ ಸಹಕಾರವನ್ನೂ ಹೆಚ್ಚಿಸಿ ಪ್ರತಿಯೊಬ್ಬ ವಿಧುರರಿಗೆ ವಿಧುರಾವಸ್ಥೆಯಿಂದ ಹೆಚ್ಚು ಸೌಖ್ಯ ಮತ್ತು ಆನಂದಉಂಟಾಗುವಂತೆ ಪ್ರಯತ್ನ ಮಾಡುತ್ತಿರಬೇಕು. ಮೇಲಿನ ಉದ್ದೇಶವು ಸ್ಪಷ್ಟವಿದ್ದು ಆಕರ್ಷಕವಿರುತ್ತದೆ. ಮಂಡಳವು ಸ್ಥಾಪಿತವಾದಕೂಡಲೇ ಸಭಾಸದರನ್ನು ಮಾಡಿಕೊಂಡು ಆದಷ್ಟು ಮಂಡಳದ ಸಂಖ್ಯಾಬಲವನ್ನು ಹೆಚ್ಚು ಮಾಡಬೇಕು ವಿಧುರರಾಗುವದು ಮನುಷ್ಯನ ಆಧೀನವಾಗಿರದೆ ದೇವರಾಧೀನವಿರುತ್ತದೆ. ಅದು ಮನುಷ್ಯರ ಆಧೀನವಿದ್ದರೆ ಈಗ ಕಂಡುಬರುವ ಸಾವಿರಗಟ್ಲೆ ಬದಲು ಲಕ್ಷಗಟ್ಲೆ ವಿಧುರರು ಸಿಗುತ್ತಿದ್ದರು. ಈಶ್ವರಾಧೀನವಿದ್ದ ವಿಷಯವಾಗಿ ಹಳಹಳಿಸಿ ಫಲವೇನು? ಆದರೆ ಕೇವಲ ಪರಮಾತ್ಮನ ಮೇಲೆ ಭಾರ ಹಾಕಿ ಮಂಡಳದ ಹಿತಚಿಂತಕರು ಸ್ವಸ್ಥ ಕುಳಿತರೆ ಜಗತ್ತಿನಲ್ಲಿ ಪ್ರಯತ್ನವಾದಕ್ಕೆ ಅರದಾಳ ಹಾಕಬೇಕಾದೀತು. ವಿಧುರನನ್ನು ನಿರ್ಮಾಣ ಮಾಡಲಿಕ್ಕೆ ಬರದಿದ್ದರೂ ದೈವಯೋಗದಿಂದ ವಿಧುರರಾದವರನ್ನು ಅದೇ ಅವಸ್ಥೆಯಲ್ಲಿಡಲಿಕ್ಕೆ ಪ್ರಯತ್ನ ಮಾಡುವದು ಪ್ರತಿಯೋರ್ವ ಮಂಡಳದ ಹಿತಚಿಂತಕನ ಆದ್ಯ ಕರ್ತವ್ಯವಿರುತ್ತದೆ. ವಿಧುರ ಮಂಡಳದ ಕಾರ್ಯಕ್ರಮದಲ್ಲಿ ಇದೇ ಮುಖ್ಯ ಕೆಲಸವಿರುತ್ತದೆ. ಸುದೈವದಿಂದ ಅಥವಾ ದುರ್ದೈವದಿಂದ ವಿಧುರಾವಸ್ಥೆಯು ಪ್ರಾಪ್ತವಾದರೆ ಅವನ ಗೂಢ ಸ್ನೇಹ ಬೆಳಿಸಿ ಬಶ್ಷದಿಂದಾಗಲೀ ಅಥವಾ ಸನ್ನೆಗಳಿಂದಾಗಲೀ ಮತ್ತು ಇತರ ಮಾರ್ಗದಿಂದಾಗಲೀ ಅವನನ್ನು ಆಮರಣ ಪರ್ಯಂತ, ಅದೇ ಸ್ಥಿತಿಯಲ್ಲಿ

ಡಲಿಕ್ಕೆ ಪ್ರಯತ್ನ ಮಾಡುವದು ಮಂಡಳದ ಮುಖ್ಯ ಕೆಲಸವಿರುತ್ತದೆ. ವಿಧುರ ಮಂಡಳದ ಮುಖ್ಯ ಕಾರ್ಯನಿರ್ದೇಶ ಮಾಡಿದ ಮೇಲೆ ಕಾರ್ಯವಲ್ಲುಂಟಾಗುವ ತೊಂದರೆಗಳನ್ನು ಹೇಳಿದರೆ ತಪ್ಪಾಗಲಾರದು.

ವಿಧುರಾವಸ್ಥೆಯು ಪ್ರಾಪ್ತವಾದ ಮೊದಲನೇ ವರುಷವು ಅತ್ಯಂತ ಕಂಟಕಮಯವಾಗಿರುತ್ತದೆ ಹೆಂಡತಿಯು ಸತ್ತ ಮೊದಲನೇ ಹದಿನೈದು ದಿವಸಗಳು ನಿಸ್ಸೀಮ ವೈರಾಗ್ಯದ ದಿವಸಗಳು. ಪತ್ನಿಯಗೂಡ ಸಹಗಮನ ಮಾಡುವ ಕಲ್ಪನೆಗಳು ಸಹ ವಿಧುರರ ತಲೆಯಲ್ಲಿ ಒಮ್ಮೊಮ್ಮೆ ತಾಕಲಾಡುತ್ತವೆ. ಪೆನಶನ್ ತೆಗೆದುಕೊಂಡು ಮನೆಯಲ್ಲಿ ಕುಳಿತ ವೃದ್ಧನಿಗೆ ಹೇಗೆ ಸಂಸಾರ ಅಸಾರವಾಗಿ ತೋರುವದೊ ಅದರಂತೆ ಹೊಸ ವಿಧುರನಿಗೆ ಸಂಸಾರ ಅಸಾರವೆಂದು ತೋರುವದು. ಮೃತಪತ್ನಿಯ ಗುಣವರ್ಣನೆಯನ್ನು ಸ್ವತಃ ಮಾಡದಿದ್ದರೂ ಎರಡನೇಯವರ ಬಾಯಿಂದ ಆ ವರ್ಣನೆಯನ್ನು ಕೇಳುವದರಲ್ಲಿ ಆನಂದವಾಗುತ್ತಿದೆ ಬಂಧುಬಳಗದವರಲ್ಲಿ ಯಾರಾದರೂ ಎರಡನೇ ಲಗ್ನದ ಮಾತೆತ್ತಿದ ಕೂಡಲೆ ನವವಿಧುರನು ಸಿಟ್ಟಿಗೆದ್ದು ಆಕಾಶ ಪಾತಾಳವನ್ನು ಒಂದು ಮಾಡುವದರಲ್ಲಿ ಎಂದೂ ಕಡಿಮೆ ಮಾಡುವುದಿಲ್ಲ ದೇವನಿರ್ಮಿತವಾದ ವಿಸ್ಮೃತರೂಪಿ ಆವರಣದ ಪ್ರಭಾವದಿಂದ ವಿಧುರನಲ್ಲಿ ಸಾವಕಾಶವಾಗಿ ಪರಿವರ್ತನವಾಗಹತ್ತುತ್ತದೆ. ಹೊರಗಿನಿಂದ ಮನೆಗೆ ಬಂದಕೂಡಲೆ ಮನೆಯು ಭಣಗುಟ್ಟುತ್ತದೆ. ಎಲ್ಲಿ ನೋಡಿದಲ್ಲಿ ಔದಾಸೀನ್ಯವು ಕಂಡು ಬರುತ್ತದೆ.

ಹೊರಗಿನಿಂದ ನೀರಡಿಸಿ ಮನೆಗೆ ಬಂದರೆ ಒಂದು ಪಾತ್ರೆ ನೀರು ಕೊಡುವವರು ಸಹ ಯಾರಿಲ್ಲೆಂಬುದು ಎಂಥ ದುರ್ದೈವವು ತನ್ನ ಚಿಕ್ಕಮಕ್ಕಳನ್ನು ನೋಡಿ ಹೊಟ್ಟೆಯಲ್ಲಿ ಬೆಂಕಿಯನ್ನು ಹಚ್ಚಿದಂತಾಗುತ್ತದೆ ವಿಧುರನ ಮನಃಸ್ಥಿತಿಯನ್ನು ಕಂಡುಹಿಡಿದು ಅವನ ಹಿತಚಿಂತಕರು ಒಕ್ಕೀ ಜೋರಿನಿಂದ ಉಪದೇಶ ಪ್ರಾರಂಭ ಮಾಡುತ್ತಾರೆ ಗೃಹಲಕ್ಷ್ಮಿಯಿಲ್ಲದ ಗೃಹದ ಭಯಾನಕ ಚಿತ್ರವಿಟ್ಟು ಐತಿಹಾಸಿಕ ಕಾಲದ ಓರ್ವ ವಿಧುರನು ಹೇಗೆ ದುರ್ಮಾರ್ಗಕ್ಕೆ ಹತ್ತಿದನೆಂಬುದನ್ನು ವೇಳೆ ಅವೇಳೆಯಲ್ಲಿ ಹೇಳುವದರಲ್ಲಿ ನವವಿಧುರನ ಬಂಧುಬಳಗದವರಿಗೂ ಮಿತ್ರರಿಗೂ ಒಂದು ತಾಮಸಿಕ ಆನಂದವೆನಿಸುತ್ತದೆ ಇವೆಲ್ಲ

ಸಂಗತಿಗಳನ್ನು ಕೇಳಿ ವಿಧುರನ ಅಂತಃಕರಣ ಮತ್ತು ಮಿದುಳು ಕಿಂಚಿತ್ ಮೆತ್ತಗಾಗುತ್ತದೆ. ಇಂಥ ಸಮಯದಲ್ಲಿ ವಿಧುರನ ಇಷ್ಟ ಮಿತ್ರರಿಗೆ ವಿಧುರನು ತರುಣ ಕಾಣಿಸುತ್ತಾನೆ. ಅವನ ವಯಸ್ಸಿನಲ್ಲಿ ಹತ್ತು ಹದಿನೈದು ವರುಷಗಳು ಕಳಚಿ ಕೆಳಗೆ ಬೀಳುತ್ತವೆ. ವಿಧುರನ ವಯಸ್ಸು ೪೦–೫೦ ಆಗಿದ್ದರೂ ಅವನ ಕಿವಿಗೆ ಬೀಳದಂತೆ ಅವನು ೩೦ ವರುಷದವನಿದ್ದಾನೆಂಬ ವಿಧಾನವನ್ನು ಪುನಃಪುನಃ ಮಾಡುವದರಿಂದ ತಾನು ನಿಜವಾಗಿಯೂ ೩೦ ವರುಷದವನಿದ್ದೇನೆಂದು ಅವನಿಗೆ ಅನಿಸಹತ್ತುತ್ತದೆ. ಇಷ್ಟಾದಮೇಲೆ ವಿಧುರ ಮಹಾರಾಜನು (ಮಹಾಭಾರತದ ವಿಧಾನದಲ್ಲಿ) ಮತ್ತೊಂದು ಮೆಟ್ಟಲನ್ನು ಏರುತ್ತಾನೆ. ಎಂದಾದರೊಮ್ಮೆ ಅಪ್ಪಿತಪ್ಪಿಯಾಗಲಿ ಇಲ್ಲವೆ ಬುದ್ಧಿಪೂರ್ವಕವಾಗಲಿ ಆತನು ತನ್ನ ಮೋರೆಯನ್ನು ಕನ್ನಡಿಯಲ್ಲಿ ನೋಡುವನು. ಆಗ ಕನ್ನಡಿಯಲ್ಲಿ ಜೊಂಡಿಗದ ಮೀಸೆಯಂತೆ ಉದ್ದವಾಗಿ ಬೆಳೆದ, ನಡುನಡುವೆ ಬೆಳ್ಳಿಯ ಬಣ್ಣದಿಂದ ವಿಭೂಷಿತವಾದ ಮೀಸೆಯಿಂದ ವಿದ್ರೂಪವಾದ ಅವಡೊತ್ತಿದ ಮೋರೆ ಕಾಣಿಸುವದು ಸಹಜವಿದೆ. ಎಲ್ಲರೂ ತರುಣನೆಂದೆನ್ನುತ್ತಿರುವಾಗ ಬಾಡಿದ ಮುಖಮುದ್ರೆಯ ಮೂಲಕ ಮುಪ್ಪಿನತನದ ಡಂಗುರ ಸಾರುವದು, ಆತನಿಗೆ ಅಸಹ್ಯವೆನಿಸುತ್ತದೆ. ಆಮೇಲೆ ಕೇವಲ ಲೌಕಿಕರ ಅಭಿಪ್ರಾಯ ಸತ್ಯ ಮಾಡಿ ತೋರಿಸುವದಕ್ಕೋಸ್ಕರ ವಿಧುರ ಮನುಷ್ಯನು ತರುಣನಾಗಲು ಧಡಪಡಿಸುವನು. ಬಿಳಿಗೂದಲುಗಳ ಸಂಖ್ಯೆ ಕಡಿಮೆ ಇದ್ದರೆ ಅಷ್ಟು ಕೂದಲುಗಳನ್ನು ತೆಗೆದು ಮೀಸೆಯನ್ನು ಒಳಿತಾಗಿ ಕತ್ತರಿಸಿ, ತಲೆಯ ಮೇಲಿನ ಕೂದಲುಗಳನ್ನು ಜೆಳಿಯಿಸಿ ತಾರುಣ್ಯದ ಸೋಗನ್ನು ಮಾಡಲು ವಿಧುರನು ಪ್ರವೃತ್ತನಾಗುತ್ತಾನೆ. ಆದರೆ ಬೆಳ್ಳಿಯ ಕೂದಲುಗಳು ಮಿತಿಮೀರಿದ್ದರೆ ಕತ್ತಿಯ ಒಂದು ಎಳೆತದಿಂದ ಮೀಸೆಯ ಗುಂಜನ್ನು ತೆಗೆದೊಗೆದು, ತನ್ನ ವಯಸ್ಸಿನಲ್ಲಿ ೨೦ ವರ್ಷ ಕಡಿಮೆ ಮಾಡಿಕೊಳ್ಳಲು ವಿಧುರನು ಪ್ರಯತ್ನಿಸುವನು. ಮೀಸೆಗಳು ಮಾಯವಾದವೆಂದರೆ ವಿಧುರಮಣಿಯು ತೀವ್ರವೇ ವಿವಾಹಬದ್ಧನಾಗುವನೆಂದು ನಿರಾತಂಕವಾಗಿ ತಿಳಿದುಕೊಳ್ಳಬೇಕು. ಈ ವಿವಾಹವನ್ನು ಆತನು ತನ್ನ ಅನುಕೂಲ ಅನಾನುಕೂಲತೆಗಾಗಿ ಮಾಡಿಕೊಳ್ಳುವನೆಂದು ಯಾರೂ ತಿಳಿಯಕೂಡದು. ಯಾಕಂದರೆ ವಿಧುರರ ವಿವಾಹದಲ್ಲಿ ಯಾವಾಗಲೂ ಪರೋಪಕಾರಬುದ್ಧಿಯಿರುತ್ತದೆ.

ಕೇವಲ ತನ್ನ ವೃದ್ಧ ಮಾತೋಶ್ರೀಯ ಸೇವಾಶುಶ್ರೂಷೆಗಾಗಲಿ, ಇಲ್ಲವೆ ತನ್ನ ಕೂಸು ಕುನ್ನಿಗಳ ಪಾಲನ ಪೋಷಣೆಗಾಗಿಯಾಗಲಿ, ಎರಡನೆಯ ಲಗ್ನವನ್ನು ಮಾಡಿಕೊಳ್ಳುವರಿರುತ್ತಾರೆ. ತನ್ನ ಸ್ವಂತದ ಸುಖೋಪಭೋಗಕ್ಕಾಗಿ ಲಗ್ನ ಮಾಡಿಕೊಳ್ಳುತ್ತೇನೆಂದು ಹೇಳುವ ವಿಧುರರು ಸಿಕ್ಕುವದು ಅಪರೂಪ

ಮೇಲಿನ ಎಲ್ಲ ವಿವೇಚನೆಯಿಂದ ವಿಧುರಾವಸ್ಥೆಯಲ್ಲಿ ನಿರಂತರವಾಗಿ ಇರುವದು ಎಷ್ಟು ಕಠಿಣವಾಗ್ಗಿದೆಯೆಂಬದು ಕಂಡುಬರುತ್ತದೆ. ಅದಕ್ಕಾಗಿಯೇ ಯಾವನೊಬ್ಬ ವಿಧುರನನ್ನು ವಿಧುರ ಮಂಡಳದ ನಿರಂತರ ಸಭಾಸದನನ್ನು ಮಾಡಿಕೊಳ್ಳುವ ಪೂರ್ವದಲ್ಲಿ ಆತನನ್ನು ಕನಿಷ್ಟ ಪಕ್ಷಕ್ಕೆ ಒಂದು ವರುಷದ ವರೆಗಾದರೂ ಕೇವಲ ಉಮೇದವಾರರ ಪಟ್ಟಿಯಲ್ಲಿಯೇ ಇಡುವದು ಸಯುಕ್ತಿಕವಾಗುವದು. ಮೇಲಿನ ಎಲ್ಲ ಮೋಹಪರಂಪರೆಯಿಂದ ಮುಕ್ತನಾಗಿ ಒಂದು ವರ್ಷದ ವರೆಗೆ ತನ್ನ ಅವಸ್ಥೆಯನ್ನು ನಿರಂತರವಾಗಿಟ್ಟರೆ ಬಳಿಕ ಆತನನ್ನು ಸಭಾಸದನನ್ನಾಗಿ ಮಾಡಿಕೊಳ್ಳುವದು ಯೋಗ್ಯವಾಗುವದು. ಉಮೇದವಾರಿಯ ಅವಧಿಯಲ್ಲಿಯೂ ಈತನನ್ನು ಸ್ವತಂತ್ರವಾಗಿಡುವದು ಯೋಗ್ಯವಲ್ಲ. ಉಮೇದವಾರರ ಪಟ್ಟಿಯಲ್ಲಿ ಆತನ ಹೆಸರನ್ನು ಹಚ್ಚಿಕೊಂಡು ನಿತ್ಯನೇಮಗಳ ಸಂಬಂಧವಾಗಿ ಕೆಲವು ನೇಮಗಳನ್ನು ಹಾಕಿಕೊಡಬೇಕು. ಕೇವಲ ದಿಗ್ದರ್ಶನವೆಂದು ಅವುಗಳಲ್ಲಿಯ ಒಂದೆರಡನ್ನು ಇಲ್ಲಿ ಉಲ್ಲೇಖಿಸುವೆವು.

(೧) ಎರಡನೇ ಅಥವಾ ಮೂರನೆಯ ಲಗ್ನ ಮಾಡಿಕೊಂಡು ಕೂಡಾ ಇಂತಿಂಥಹ ಮನುಷ್ಯನು ಸುಖದಿಂದ ಸಂಸಾರ ಮಾಡುತ್ತಿರುವನು ಎಂಬ ವಿಷಯಗಳ ಸತ್ಯ ಅಸತ್ಯ ಸುದ್ದಿಗಳನ್ನು ಯಾರಾದರೂ ಹೇಳಿದರೆ ವಿಧುರನ ಅವುಗಳಿಗೆ ಕಿವಿಗೊಡಬಾರದು. ಅಥವಾ ಕೇಳಿದರೂ ಅದನ್ನು ನಂಬಬಾರದು.

(೨) ವಿಧುರನು ತರುಣನಂತೆ ಕಾಣಿಸಿಕೊಳ್ಳುವ ಯತ್ನವನ್ನು ಎಂದೂ ಮಾಡಕೂಡದು. ಇಷ್ಟೇ ಅಲ್ಲ ವೃದ್ಧನಂತೆ ತೋರಿಸಿಕೊಳ್ಳುವ ಯತ್ನವನ್ನು ಮಾಡಬೇಕು ಅಂದರೆ ಪುನಃ ಲಗ್ನವಾಗಲು ಆಗ್ರಹ ಮಾಡುವ ಒಂದು ಆಧಾರವು ಕಡಿಮೆಯಾಗುತ್ತದೆ. ಇದಲ್ಲದೆ ವಿಧುರ ಸಂನೆಯಿಂದ ಕೆಲವೊಂದು ವ್ಯವಸ್ಥೆ ಮಾಡಬೇಕಾಗುತ್ತದೆ.

(೩) ವಿಧುರನಿಗೆ ನಿರುದ್ಯೋಗಿಯಾಗಿ ಕೂಡಲು ತುಸು ಕೂಡ ಅವಕಾಶ ಕೊಡಕೂಡದು. ಹಗಲಿರುಳು ಆತನ ಮನಸ್ಸು ಬುದ್ಧಿಯು ಯಾವದೇ ವ್ಯವಸಾಯದಲ್ಲಿ ತೊಡಕದಿದ್ದರೆ ಗೂಳಿಯಂತೆ ಇರುವ ಆತನ ಚಿತ್ತವು ಅವ್ಯವಸ್ಥಿತವಾಗುತ್ತದೆ. ಆದುದರಿಂದ ವಿಧುರನನ್ನು ಯಾವದೊಂದು ಕಾರ್ಯದಲ್ಲಿ ತೊಡಕಿಸಿ, ಆತನಿಗೆ ಆತನ ವಿಧುರಾವಸ್ಥೆಯ ವಿಸ್ಮರಣೆಯನ್ನು ಮಾಡುವದು ವಿಧುರ ಮಂಡಲದ ಕರ್ತವ್ಯವಿದೆ.

(೪) ಎರಡನೆಯ ಮಾತು ತುಸು ಖರ್ಚಿನದಿದೆ. ಬಾಲ ವಿಧವೆಯರಿಗಾಗಲೀ, ವೃದ್ಧ ವಿಧವೆಯರಿಗಾಗಲೀ, ಶಿಕ್ಷಣವು ದೊರೆತು ತನ್ಮೂಲಕ ಅವರಿಗೆ ಸಮಾಧಾನದಿಂದ ಕಾಲಕಳೆಯಲು ಬರಬೇಕೆಂದು ತಿಳಿದು ಅವರ ದುಸ್ಥಿತಿಯ ವಿಸ್ಮರಣೆವುಂಟಾಗಬೇಕಾಗಬೇಕೆಂದು ಅಲ್ಲಲ್ಲಿ ವಿಧವಾಶ್ರಮಗಳನ್ನು ಅನಾಥ ಬಾಲಿಕಾಶ್ರಮಗಳನ್ನು ಸ್ಥಾಪಿಸಲಾಗಿದೆಯಷ್ಟೆ! ಇದೇ ಪಂಕ್ತಿಯನ್ನನುಸರಿಸಿ ಮತ್ತು ಇದೇ ಧ್ಯೇಯದಿಂದ ಠಾಣಠಾಣಗಳಲ್ಲಿ ನಿರಾಶ್ರಿತ ವಿಧುರಾಶ್ರಮಗಳನ್ನು ಸ್ಥಾಪಿಸಬೇಕೆಂದು ನಮ್ಮ ಸೂಚನೆಯಿದೆ.

ಈ ಆಶ್ರಮವು ಶಕ್ಯವಾದಷ್ಟು ಕೈಲಾದ ಮಟ್ಟಿಗೆ ವಿಧವಾಶ್ರಮಗಳಿಂದ ದೂರವಾಗಿರಬೇಕೆಂದು ಯಾವ ಸಮಂಜಸ ಪುರುಷನಿಗಾದರೂ ಹೊಳೆಯದೆ ಇರದು. ಅದೇ ಪ್ರಕಾರಾ ಪ್ರತಿಯೊಂದು ಜಿಲ್ಲೆಯಲ್ಲಿ ಮುದುಕ ವರಗಳಿಗೆ ಕನ್ಯಾದಾನ ಮಾಡಿಕೊಟ್ಟು ಸಂಪತ್ತಿಯನ್ನು ದೊರಕಿಸುವ ವಿಷಯದಲ್ಲಿ ಪ್ರಸಿದ್ಧಿಯನ್ನು ಪಡೆದಿರುತ್ತದೆ. ಈ ಊರುಗಳ ಸಂಪರ್ಕವು ವಿಧುರಾಶ್ರಮಗಳಿಗೆ ಆಗಬಾರದಂತೆ ಎಚ್ಚರಪಡುವದು ಅವಶ್ಯವು. ಹೀಗಾದರೆಯೇ ಈ ಆಶ್ರಮಗಳು ಗಟ್ಟಿಯಾಗಿ ಉಳಿಯುವವು.

ಮೇಲಿನ ಸೂಚನೆಗಳನ್ನು ಲಕ್ಷದಲ್ಲಿಟ್ಟುಕೊಂಡು ಕೆಲಸ ಮಾಡಹತ್ತಿದರೆ, ವಿಧುರ ಮಂಡಳದ ಉತ್ಕರ್ಷವಾಗಲು ಬಹಳ ಅವಕಾಶವು ಬೇಕಾಗುವದಿಲ್ಲ. ನಮ್ಮ ಕರ್ನಾಟಕದಲ್ಲಿ ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯದರ್ಶಿ, ಪ್ರಚಾರಕ, ಪ್ರಸಾರಕ, ಕೋಶಾಧ್ಯಕ್ಷ, ಮೊದಲಾದ ಮಂಡಳದ ಹೊಣೆಗಾರಿಕೆಯ ಕೆಲಸವನ್ನು ಕೈಕೊಳ್ಳಲು ಸಾರ್ವಜನಿಕ ಕೆಲಸಕ್ಕೆ ಆತ್ಮಾರ್ಪಣ ಮಾಡಿದ ಅನೇಕ ವಿಧುರ ಮಣಿಗಳು ಸಿಕ್ಕುವರು. ಆದರೆ ಈ ಸತ್ಕಾರ್ಯವು

ಆರಂಭವಾಗಲಿಕ್ಕೆ ಯಾರಾದರೂ ಮುಂದಾಳುಗಳ ಕೈನೆರವು ಅವಶ್ಯವಾಗಿದೆ.

ಅನೇಕ ಕಾರ್ಯ ಬಾಹುಲ್ಯದ ಮೂಲಕ ಲೋಕಮಾನ್ಯರಿಗೆ ಸವಡು ಸಿಕ್ಕಲಿಲ್ಲ. ಇಲ್ಲದಿದ್ದರೆ ಮಂಡಾಲೆಯಿಂದ ತಿರುಗಿ ಬಂದ ಬಳಿಕ ಒಂದೇ ಒಂದು ವರ್ಷದಲ್ಲಿ ಇಂತಹ ಮಂಡಲವನ್ನು ಸ್ಥಾಪಿಸಿಬಿಡುತ್ತಿದ್ದರು. ಅವರು ಅನುಯಾಯಿಗಳ ಪೈಕಿ ಅನೇಕ ಜನರು ವಿಧುರರಿದ್ದರೂ ಲೋಕಮಾನ್ಯರಲ್ಲಿದ್ದ ಮುಂಬರಿಯು ಇವರಲ್ಲಿಲ್ಲದ್ದರಿಂದ ಈ ಕಾರ್ಯವು ಹಾಗೆಯೇ ಉಳಿದು ಹೋಗಿದೆ. ಇರಲಿ, ಈಗ ಮಹಾತ್ಮಾ ಗಾಂಧಿಯವರು ವಿಲಾಯತಿಗೆ ಹೋಗಿದ್ದಾರೆ. ಅವರು ಮರಳಿ ಬಂದರೆಂದರೆ ಸುಮ್ಮನೆ ಏನಾದರೂ ಗಲಭೆ ಎಬ್ಬಿಸುತ್ತಾರೆ. ಅವರಿಲ್ಲದ ಈ ವೇಳೆಯಲ್ಲಿ ಜೋರಿನಿಂದ ಸಾಹಸ ಮಾಡಿದರೆ ಈ ಮಂಡಳವು ಸಹಜವಾಗಿ ಸ್ಥಾಪಿತವಾಗುವದೆಂದು ನಮಗೆ ತುಂಬಾ ನಂಬಿಗೆಯಾಗಿದೆ.

ಪ್ರಸಿದ್ಧಿಕಾಲ — ಓರ್ವ ವಿಧುರ.

೨೯-೧೧-೩೧

# ಸ್ವಾಗತಾಧ್ಯಕ್ಷರ ಭಾಷಣ

*

ದಾದಾಸಾಹೇಬ, ತಾತ್ಯಾಸಾಹೇಬ, ಕಾಕಾಸಾಹೇಬ, ಬಾಪೂಸಾಹೇಬ ಅಣ್ಣಾಸಾಹೇಬ ಹಾಗೂ ಪ್ರತಿನಿಧಿ ಬಂಧುಭಗಿನಿಯರೆ, ಬೆಳಗಾವಿ ಶಹರದ ಮರಾಠಿ ಮಾತನಾಡುವವರ ಪರವಾಗಿ ಅತ್ಯಾನಂದದಿಂದ ಇಂದು ತಮ್ಮೆಲ್ಲರಿಗೆ ನಾನು ಸ್ವಾಗತ ಒಯಸುತ್ತೇನೆ. ದೂರದೂರದ ಪ್ರವಾಸ ಕೈಕೊಂಡು ನಮ್ಮ ಗ್ರಾಮಕ್ಕೆ ಬಂದದ್ದಕ್ಕಾಗಿ ತಮಗೆ ಎಷ್ಟು ಆಭಾರ ಸಲ್ಲಿಸಿದರೂ ಕಡಮೆಯೇ. ಯಾವ ಪ್ರಾಂತದ ಬಹುಜನ ಸಮಾಜಕ್ಕೆ ತಮ್ಮ ಸಾಹಿತ್ಯದ ಪರಿಚಯವಿಲ್ಲವೋ ಹಾಗು ಎಲ್ಲಿ ತಮ್ಮ ಭಾಷೆಯನ್ನು ಮಾತನಾಡುವವರ ಸಂಖ್ಯೆಕೂಡ ತೀರ ಕಡಿಮೆಯಾಗಿದೆಯೋ ಅಂಥ ಅಪರಿಚಿತ ಪ್ರಾಂತಕ್ಕೆ ಈ ಪರಿಷತ್ತಿನ ನಿಮಿತ್ತವಾಗಿ ತಾವು ದರ್ಶನಲಾಭವನ್ನಿತ್ತದ್ದು ಮಹದ್ಭಾಗ್ಯವೆಂದೇ ಭಾವಿಸಬೇಕು. ಮರಾಠೀ ಸಾಹಿತ್ಯ ಪರಿಷತ್ತಿನ ನಿಮಿತ್ತವಾಗಿ ಮಹಾರಾಷ್ಟ್ರೇತರ ಪ್ರಾಂತಕ್ಕೆ ತಮಗೆ ಆಗಾಗ್ಗೆ ಹೋಗುವ ಪ್ರಸಂಗ ಬರುವದು ಸಹಜ. ಅಲ್ಲಿಯ ಭಾಷಾಭಿನ್ನತೆಯ ಅಜ್ಞಾನದ ಮೂಲಕ ಒದಗುವ ಅನನುಕೂಲಗಳನ್ನು ಸಹಿಸುವ ರೂಢಿ ತಮಗಿದ್ದದ್ದು ಇದರಲ್ಲೊಂದು ಸಮಾಧಾನದ ಸಂಗತಿ. ಮಿರಜಿಯ ಈಚೆಗೆ ಬಂದಾಗ ಈ ತ್ರಾಸು, ಹೆಚ್ಚಾಗಿ ತಮ್ಮ ಅನುಭವಕ್ಕೆ ಬಂದಿರಲು ಸಾಕು. ಆದರೆ ದಯಾಳುವಾದ ಇಂಗ್ಲಿಷ್ ಸರಕಾರದ ಪುಣ್ಯದಿಂದ ಹಿಂದುಸ್ಥಾನದ ಎಲ್ಲ ಭಾಷೆಗಳಲ್ಲಿಯೂ ಚಹಕ್ಕೆ ಚಹ ಎಂದೇ ಅನ್ನುತ್ತಿರುವದರಿಂದ ಬೆಳಗಿನ ತಮ್ಮ ಚಹದ ಚಟ ಹಿಂಗಿಸಲು ತಮಗೆ ತ್ರಾಸ ಆಗಿರಲಾರದೆಂದು ನಾನು ಆಶಿಸುತ್ತೇನೆ. ಬಂಧು ಭಗಿನಿಯರೆ, ಯಾವಾಗಲೂ ಕರ್ಣಕಟುವಾದ ಕನ್ನಡ ಭಾಷಣಗಳನ್ನೇ ಕೇಳಿ ಕೇಳಿ ಬೇಸರಗೊಂಡ ನಮ್ಮ ಕಿವಿಗಳಿಗೆ, ತಮ್ಮ ಶುಭಾಗಮನದಿಂದ, ಉಚ್ಚಾರಿತ ಹಾಗು ಅನುಚ್ಚಾರಿತ ಅನುಸ್ವಾರಗಳಿಂದ ತುಂಬಿದ ಮರಾಠೀ ಭಾಷಣಗಳನ್ನು ಕೇಳುವ ಅಮೂಲ್ಯ ಸಂಧಿ ದೊರೆತದ್ದು ನಮ್ಮ ಸುದೈವವೆಂದೇ ಹೇಳಬೇಕು.

## ಬೆಳಗಾವಿ ಶಹರ

ಈ ಪಟ್ಟಣವನ್ನು ಬಹಳ ಪ್ರಾಚೀನಕಾಲದಲ್ಲಿ ಜೈನಧರ್ಮದ ರಾಜರು ಸ್ಥಾಪಿಸಿದರೆಂದು ಹೇಳುತ್ತಾರೆ. ಆದರೆ ಇದರ ಉಲ್ಲೇಖ ಕ್ರಿ. ಶ. ೧೧೬೦ರ ಗುಲ್ಲಹಳ್ಳಿಯ ಶಿಲಾಲೇಖದಲ್ಲಿ ದೊರೆಯುತ್ತದೆ. ವೇಲುಗ್ರಾಮ ಇದು ೭೦ ಹಳ್ಳಿಯ ಫಿರ್ಕಾದ ಒಂದು ಮುಖ್ಯ ಸ್ಥಳವೆಂದು ಅದರಲ್ಲಿ ಕಾಣಿಸಲಾಗಿದೆ. ಆ ಕಾಲಕ್ಕೆ ಈ ಪಟ್ಟಣವು ಕಲ್ಯಾಣದ ಚಾಲುಕ್ಯರ ಮಾಂಡಲೀಕರಾದ ಕದಂಬರಾಜರ ವಶದಲ್ಲಿತ್ತು. ಮುಂದೆ ಇದು ಶಟ್ಟರಾಜರವಶಕ್ಕೆ ಬಂದಮೇಲೆ ಸವದತ್ತಿಯನ್ನು ಬಿಟ್ಟು ಬೆಳಗಾವಿಯನ್ನೇ ಅವರು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಆಮೇಲೆ ದೇವಗಿರಿಯ ಯಾದವರು ಇದನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿದ್ದರು. ಇವರ ತರುವಾಯ ಕೆಲವು ಕಾಲದ ಅವರ ಇತಿಹಾಸ ನಮಗೆ ಅಜ್ಞಾತವಾಗಿದೆ. ಮುಂದೆ ಕ್ರಿ. ಶ. ೧೪೭೧ ರಲ್ಲಿ ಬಾಹಮನಿ ಬಾದಶಹರು ವಿಜಯನಗರದ ಅರಸರಿಂದ ಈ ಶಹರವನ್ನು ವಶಪಡಿಸಿಕೊಂಡರೆಂದು ಫರಿಸ್ತನು ಹೇಳುತ್ತಾನೆ. ವಿಜಾಪುರದ ಸರದಾರನಾದ ಅಸದಖಾನನು ಕಟ್ಟಿಸಿದ ಬೆಳಗಾವಿ ಕೋಟೆಯಲ್ಲಿರುವ ಮಸೀದಿಯಮೇಲೆ ೧೫೧೯ನೆಯ ಇಸ್ವಿಯನ್ನು ಹಾಕಿದೆ. ಇದರ ಮೇಲಿಂದ ಬೆಳಗಾಂವಿ ಶಹರವು ಪ್ರಾಚೀನವೂ ಇತಿಹಾಸ ಪ್ರಸಿದ್ಧವೂ ಇರುವದೆಂಬದು ಸ್ಪಷ್ಟವಾಗುತ್ತದೆ. ಆದರೆ ಬೆಳಗಾಂವ ಎಂಬ ಹೆಸರು ಬಂದದ್ದು ಹೇಗೆ ? ಈ ವಿಷಯದಲ್ಲಿ ಅನೇಕರು ಅನೇಕ ವಿಧವಾಗಿ ತರ್ಕಿಸುತ್ತಾರೆ. ಯಾದವ ಮನೆತನದಲ್ಲಿ ವೇಣು ಎಂಬ ರಾಜನಿದ್ದ. ಅವನಿಂದಲೇ ಇದಕ್ಕೆ ವೇಣುಗ್ರಾಮ ಎಂಬ ಹೆಸರು ಬಂದು, ಅದೇ ಅಪಭ್ರಂಶವಾಗಿ ಈಗಿನ ಹೆಸರು ಬಂತು ಎಂದು ಕೆಲವರು ಹೇಳುತ್ತಾರೆ. ಇಲ್ಲಿಸುತ್ತುಮುತ್ತು ಬಿದಿರಿನ ಪೂದರುಗಳು ಅನೇಕವಾಗಿದ್ದು ಅದರ ಮೂಲಕ ವೇಣುಗ್ರಾಮ ಎಂಬ ಹೆಸರು ಬಂದು ಅದೇ ಬರಬರುತ್ತ ವೇಲುಗ್ರಾಮ, ಬೇಲುಗ್ರಾಮ, ಬೆಲುಗಾಮ, ಬೆಳಗಾಂವ ಹೀಗೆ ಅಪಭ್ರಂಶ ರೂಪ ತಾಳಿರಬೇಕೆಂದು ಕೆಲವರ ಮತ. ಆದರೆ ಈ ಎರಡೂ ಅಭಿಪ್ರಾಯಗಳು ನಮ್ಮ ಅಭಿಪ್ರಾಯಕ್ಕೆ ಹೊಂದುವದಿಲ್ಲ. ನಮ್ಮ ಅಭಿಪ್ರಾಯದ ಪ್ರಕಾರ ಬೆಲಗಾಮ ಇದು ಮರಾಠಿ ಶಬ್ದ. ಮುರವತ್ತು ಇಲ್ಲದವ ಬೇಮುರ್ವತ್, ಜಬಾಬದಾರಿ ಇಲ್ಲದವ ಬೇಜಬಾಬದಾರ ಇವು ಯಾವ ಪ್ರಕಾರ ಉರ್ದು ಸಂಮಿಶ್ರ ಮರಾಠಿ

ಯಾಗಿವೆಯೋ ಅದೇ ಪ್ರಕಾರ ಯಾವ ಊರ ಜನರಿಗೆ ಬಂಧನ ಅಥವಾ ಲಗಾಮು ಇಲ್ಲವೋ ಆ ಊರು ಜೇಲಗಾಮು ಎಂದು ಇರಬೇಕು. ಇದೇ ಮುಂದೆ ಅಪಭ್ರಂಶವಾಗಿ ಬೆಳಗಾಂವ ಎಂದು ಆಗಿರಬೇಕು. ಇನ್ನೊಂದು ಅರ್ಥದಿಂದಲೂ ಈ ಹೆಸರು ಈ ಊರಿಗೆ ಒಪ್ಪುತ್ತದೆ. ನಾವು ಎಷ್ಟೋ ತಲೆಗಳಿಂದ ಈ ಊರಲ್ಲಿದ್ದರೂ ಭಾಷೆ ಮತ್ತು ವಾಙ್ಮಯದ ವಿಷಯದಲ್ಲಿ ಪೂರ ದುರ್ಲಕ್ಷವುಳ್ಳವರಾಗಿದ್ದೇವೆ. ಆ ಕಾರಣದಿಂದಲೂ ಇದಕ್ಕೆ ಬಂದ ಹೆಸರು ಯಥಾರ್ಥವಾದದ್ದೆಂದೇ ಹೇಳಬಹುದು. ಚಾಲುಕ್ಯ, ಕದಂಬ, ರಟ್ಟ ಅಥವಾ ವಿಜಯನಗರ ಮುಂತಾದ ರಾಜರು ಕನ್ನಡಿಗರಾಗಿದ್ದು, ಮತ್ತು ಕ್ರಿ. ಶ. ೧೮೬೦ರಲ್ಲಿ ದಕ್ಷಿಣದಲ್ಲಿ ಮುಸಲ್ಮಾನರ ಪ್ರವೇಶವೂ ಇಲ್ಲದಿರುವಾಗ, ಈ ಉರ್ದು-ಮರಾಠಿ ಹೆಸರು ಈ ಊರಿಗೆ ಬಂದದ್ದು ಹೇಗೆ ಎಂದು ಕೆಲವರು ಸಂಶಯಪಡಬಹುದು. ಆದರೆ 'ಮಧ್ಯಯುಗೀನ ಭಾರತ'ಕಾರರ ಪ್ರಮಾಣ ಸರಣಿಯಮೇರೆಗೆ ಹಿಂದುಸ್ಥಾನದ ಯಾವ ರಾಜರನ್ನೂ ಮರಾಠಿರಾಜರನ್ನಾಗಿ ಮಾಡಲು ಬರುತ್ತದೆ- ಆ ರಾಜರ ಶಿಲಾಲೇಖಗಳ ಭಾಷೆ ಹಾಗು ಲಿಪಿ ಕನ್ನಡವಿದ್ದರೂ, ಅವನ್ನು ಕೊರೆದ ಶಿಲ್ಪಿಗರು ಕನ್ನಡಿಗರಿದ್ದಿರಬಹುದಾಗಲಿ, ರಾಜರು ಮರಾಠಿಗರೇ ಇದ್ದರೆಂದು ಹೇಳಬೇಕಾಗುತ್ತದೆ. ಮೇಲಿನ ಈ ಎಲ್ಲ ವಿವೇಚನೆಯ ಮೇಲಿಂದ ಬೆಳಗಾವಿಯನ್ನು ಕರ್ನಾಟಕದಲ್ಲಿ ದೂಡುವದು ಎಷ್ಟೊಂದು ಅನ್ಯಾಯದ್ದೆಂಬದು ತಮಗೆ ತಿಳಿದು ಬರುವದು. ಇಂದಿನ ಈ ಸಾಹಿತ್ಯ ಪರಿಷತ್ತು ಬೆಳಗಾವಿಯ ಇತಿಹಾಸದಲ್ಲಿಯೇ ಒಂದು ಮಹತ್ವದ ಸ್ಥಾನವನ್ನು ಪಡೆಯಬಹುದು.

ತಮ್ಮಂಥ ಮಹಾ ಮಹಾ ಇತಿಹಾಸಕಾರರು, ನಿಬಂಧಕಾರರು, ನಾಟಕಕಾರರು, ವರ್ತಮಾನಪತ್ರಕಾರರು, ಮತ್ತು ಟೀಕಾಕಾರರು ಇಲ್ಲಿ ಸೇರಿರುವಾಗ ಅವರೆದುರಿನಲ್ಲಿ ಬೆಳಗಾವಿಯವರು ಮಾಡಿದ ಸಾಹಿತ್ಯ ಸೇವೆಯ ಉಲ್ಲೇಖ ಮಾಡುವದು ಧಾರ್ಷ್ಟ್ಯವಾಗಬಹುದು. ಆದರೂ ಕಾಲೇಜದಿಂದ ಸೂಟಿಯಲ್ಲಿ ಹಿರಿಯಣ್ಣ ಮನೆಗೆ ಬಂದಾಗ, ಚಿಕ್ಕತಮ್ಮ ತನ್ನ ಸಾಹಸ ಕೃತ್ಯಗಳನ್ನೆಲ್ಲ ಬಣ್ಣಿಸಲು ಹೇಗೆ ಉತ್ಸುಕನಾಗಿರುವನೊ ಹಾಗೆ ನಾನು ಕೂಡ ನಮ್ಮ ಸಾಹಿತ್ಯ ಸೇವೆಯನ್ನು ತಮ್ಮೆದುರಿಗೆ ಹೇಳಲು ಉತ್ಸುಕನಾಗಿದ್ದೇನೆ.

## ಮಾತೃಭಾಷೆಯೊ ಭಾರ್ಯಾಭಾಷೆಯೊ ?

ನಮ್ಮ ದುರದೃಷ್ಟಕ್ಕೆ ನಮ್ಮ ಅನೇಕರ ಮಾತೃಭಾಷೆ ಕನ್ನಡವಾಗಿದ್ದರೂ, ನಾವು ದೊಡ್ಡವರಾಗಿ ಶಾಲೆ ಕಾಲೇಜುಗಳನ್ನು ಸೇರುತ್ತಲೇ ತಾಯಿಯ ಪ್ರೀತಿಗೆ ಎರವಾದೆವು; ಮುಂದೆ ನಮ್ಮ ಸುದೈವದಿಂದ ಮರಾಠೀ ಮಾತನಾಡುವ ಹೆಂಡಂದಿರೇ ನಮಗೆ ದೊರೆತು, ಅವರ ಗೃಹಪ್ರವೇಶದ ಜೊತೆಗೆ ಮರಾಠಿಯದೂ ಗೃಹಪ್ರವೇಶವಾಯಿತು. ಅಂದಿನಿಂದ ಅಹೋರಾತ್ರಿ, ಹೆಂಡತಿಯ ಜತೆಗೇ ನಮಗೆ ಹೆಚ್ಚು ಸಂಬಂಧ ಬರುತ್ತಿರುವ ಮೂಲಕ ನಾವು ಮಾತೃಭಾಷೆಗಿಂತ ಭಾರ್ಯಾಭಾಷೆಗೆ ವಿಶೇಷ ಮಹತ್ವ ಕೊಡುತ್ತ ಬಂದೆವು. ನಮ್ಮ ಭಾರ್ಯಾಭಾಷೆಯೇ ಮುಂದೆ ನಮ್ಮ ಮಕ್ಕಳ ಮಾತೃಭಾಷೆ ಆಯಿತೆಂಬದನ್ನು ತಮ್ಮಂಥ ಸುಜ್ಞರಿಗೆ ಒಡೆದು ಹೇಳುವ ಕಾರಣವಿಲ್ಲ. ಕೆಲವೊಂದು ಸಲ ನಮ್ಮ ಮನೆಯಲ್ಲಿ ಅತ್ತೆ-ಸೊಸೆಯರಲ್ಲಿ ಜಗಳವುಂಟಾದಾಗ ಮನೆಗೆ, ಕನ್ನಡ ಮರಾಠಿಯ ವಾದಕ್ಕೆ ಬಲಿಯಾದ ಸಭೆಯ ಕಳೆ ಬರುತ್ತದೆ. ಕೊನೆಗೆ ತಾಯಿ ಮುಪ್ಪಿನವಳಾದ್ದರಿಂದ ಭಾರ್ಯಾ ಭಾಷೆಯ ಮುಂದೆ ಮಾತೃಭಾಷೆಯ ಆಟ ನಡೆಯದಂತಾಗುತ್ತದೆ. ನಮ್ಮಲ್ಲಿಯ ಅನೇಕರ ಮನೆಯಲ್ಲಿ ಶುಭಪ್ರಸಂಗದಲ್ಲಿಯಾದರೂ ಮರಾಠೀ ಭಾಷೆಯ ಉಚ್ಚಾರ ಘಟಿಸಲಿ ಎಂದು ನಮ್ಮ ಹೆಣ್ಣುಮಕ್ಕಳಿಗೆ ಗಂಡನ ಹೆಸರು ಹೇಳುವಾಗ ಮರಾಠೀ ಒಗಟಗಳನ್ನೇ ಹಾಕುವ ರೂಢಿಯನ್ನು ಹಚ್ಚಿದ್ದೇವೆ.

## ಸಮಾಜದಲ್ಲಿಯ ಸಾಹಿತ್ಯಸೇವೆ

ಮನೆಯಲ್ಲಿಯ ಸಾಹಿತ್ಯ ಸೇವೆಯ ವಿಚಾರ ಈಗ ಹೇಳಿದ್ದಾಯಿತು ಇನ್ನು ಸಾಮಾಜಿಕವಾಗಿ ನಾವು ಮರಾಠಿಭಾಷೆಯ ಸೇವೆಯನ್ನು ಯಾವ ರೀತಿಯಲ್ಲಿ ಮಾಡುತ್ತೇವೆಂಬುದನ್ನು ಸ್ವಲ್ಪದರಲ್ಲಿ ಹೇಳುತ್ತೇನೆ. ಕೆಲವು ಪ್ರಸಂಗದಲ್ಲಿ ನಿರ್ವಾಹವಿಲ್ಲದೆ ನಮಗೆ ಕನ್ನಡ ಮಾತನಾಡುವ ಅಗತ್ಯ ಬೀಳುತ್ತದೆ. ಆಗ ನಾವು ಮರಾಠೀ ಕ್ರಿಯಾಪದಗಳಿಗೆ ಕನ್ನಡ ಪ್ರತ್ಯಯಗಳನ್ನು ಹಚ್ಚಿ, ನಮ್ಮ ಭಾಷೆಯ ಪ್ರಭಾವ ಕನ್ನಡದ ಮೇಲೆ ಬೀಳುವಂತೆ ಮಾಡುತ್ತೇವೆ. ಕೋರ್ಟುಕಚೇರಿಗಳಲ್ಲಿ ಕೆಲಸ ಮಾಡುವ ನಮ್ಮಲ್ಲಿ ಅನೇಕ

ರಿಗೆ ಮೇಲಿಂದ ಮೇಲೆ ಇಂಥ ಪ್ರಸಂಗಗಳು ಬರುತ್ತವೆ. ಆಗ ಕನ್ನಡ ಬರುವದಿಲ್ಲ ಎಂದು ಹೇಳುವದು ನಮಗೇ ಕೇಡು. ಯಾಕಂದರೆ, ವಕೀಲಿಯ ಸನದು ಪಡೆಯುವಾಗ ಓದಲು, ಮಾತನಾಡಲು ಕನ್ನಡ ಚೆನ್ನಾಗಿ ಬರುತ್ತದೆ ಎಂದು ಹೇಳಲೇಬೇಕಾಗುತ್ತದೆ. ನಮ್ಮ ಉದ್ಯೋಗದ ಮುಖಾಂತರ ಕನ್ನಡವನ್ನು ಹೆಚ್ಚು ಸುಸಂಸ್ಕೃತವಾಗಿ ಮಾಡುವ ನಮ್ಮ ಪ್ರಯತ್ನವಂತೂ ಹೀಗೆ ನಡೆದೇ ಇದೆ. ಇಂಗ್ಲೀಷಿನಂತೆ ಕನ್ನಡದಲ್ಲಿಯೂ ಪುರುಷ ಪುಲ್ಲಿಂಗ, ಸ್ತ್ರೀ ಸ್ತ್ರೀಲಿಂಗ ಮಿಕ್ಕವೆಲ್ಲ ನಪುಂಸಕಲಿಂಗ ಎಂದು ನಿಯಮವಿದೆ. ಆದರೆ ನಾವು ಕನ್ನಡ ಮಾತನಾಡುವಾಗ ಮರಾಠಿಯೊಳಗಿನ ಲಿಂಗಭೇದಗಳನ್ನೂ ಅನೇಕ ಸಲ ಆ ಭಾಷೆಯಲ್ಲಿ ತುರುಕುತ್ತೇವೆ. ಆದರೆ ಒಂದೇ ಗಿಡದಿಂದ ಆದ ಕಂಭ ಪುಲ್ಲಿಂಗ, ಜಂತೆ ಸ್ತ್ರೀಲಿಂಗ ಮೂಲ ಗಿಡ ಮಾತ್ರ ನಪುಂಸಕಲಿಂಗ ಇದು ಹೇಗೆ ಎನ್ನುವದೇ ನಮ್ಮ ಬುದ್ಧಿಗೆ ಇನ್ನೂ ನಿಲುಕದ ವಿಷಯವಾಗಿದೆ. ಇದಕ್ಕೇನು ಮಾಡುವದು ?

## ವರ್ತಮಾನಪತ್ರಗಳು

ಶುದ್ಧ ಬೆಳಗಾವಿಯ ಮರಾಠೀ ಸಾಹಿತ್ಯ ಸೇವಕರ ವಿಚಾರ ಹೇಳುವ ಮೊದಲು ಇಲ್ಲಿಯ ಮರಾಠೀ ವರ್ತಮಾನಪತ್ರಗಳ ನಾಮನಿರ್ದೇಶ ಮಾಡುವದು ಅಗತ್ಯ. ಇಂದು ಈ ಶಹರದಲ್ಲಿ ೫ ೬ ಮರಾಠೀ ವರ್ತಮಾನ ಪತ್ರಗಳು ಪ್ರತಿವಾರ ಪ್ರಸಿದ್ಧವಾಗುತ್ತಿರುವದನ್ನು ನೋಡಿದರೆ, ಬೆಳಗಾಂವಿಯವರಿಗೆ ಮರಾಠೀ ಭಾಷೆಯ ಬಗ್ಗೆ ಎಷ್ಟೊಂದು ಅಭಿಮಾನವಿದೆ ಎನ್ನುವದು ಕಂಡು ಬರುತ್ತದೆ. ಆದರೆ ಇಲ್ಲಿ ಕಾಯದೆ ಮಂಡಳಗಳು ಇಲ್ಲದಿರುವದರಿಂದ, ಕೇವಲ ಮುನಸಿಪಾಲಿಟಿ ಹಾಗು ಲೋಕಲ್ ಬೋರ್ಡುಗಳಲ್ಲಿ ನಡೆಯುವ ಕೆಲಸದ ರಂಜಕ ವರ್ಣನೆಗಳನ್ನೇ ಕೊಟ್ಟು, ಜನರ ಮನಸ್ಸನ್ನು ಆಕರ್ಷಿಸಬೇಕಾಗುವದೆಂಬುದು ನಮ್ಮ ವರ್ತಮಾನಪತ್ರಗಳ ತಪ್ಪಲ್ಲ. ಪುಟಗಳು ಕಡಮೆ ಇದ್ದರೂ ಔಷಧದ ಜಾಹೀರಾತುಗಳನ್ನೇ ಎದ್ದು ಕಾಣಿಸುವಂತೆ ಮಾಡಿ ವಾಚಕರ ಮನಸ್ಸನ್ನು ರಂಜಿಸಬೇಕಾಗುತ್ತದೆ. ಏನೇ ಆದರೂ ನಷ್ಟವನ್ನು ಸಹಿಸಿಕೊಡ ಮರಾಠೀ ಸಾಹಿತ್ಯ ಸೇವೆಯನ್ನು ಎಡೆಬಿಡದೆ ಮಾಡಬೇಕೆಂಬ ಧ್ಯೇಯದ ಹಾದಿಯಲ್ಲಿ ಕಾರ್ಯಮಾಡುತ್ತಿರುವ ನಮ್ಮ ವರ್ತಮಾನಪತ್ರಕಾರರನ್ನೂ ನಾವು ಅಭಿನಂದಿಸದೆ ಇರಲಾರೆವು.

## ನಿಜವಾದ ಸಾಹಿತ್ಯದ ಕೊರತೆ

ಇನ್ನು ರೂಢಿಯಲ್ಲಿ ಯಾವದಕ್ಕೆ ಸಾಹಿತ್ಯ ಎಂದು ನಾವು ಹೇಳುತ್ತೇವೋ ಅಂಥ ಮರಾಠೀ ಸಾಹಿತ್ಯ ಬೆಳಗಾವಿಯಲ್ಲಿ ಇನ್ನೂ ಹೊರಬಂದಿಲ್ಲ ಎಂಬ ಮಾತನ್ನು ನಾವು ಒಪ್ಪಲೇಬೇಕು. ಈ ಹಾದಿಯಲ್ಲಿ ಪ್ರಯತ್ನಗಳು ನಡೆಯದೆ ಇಲ್ಲ. ಮಹಾರಾಷ್ಟ್ರದಲ್ಲಿ ಇದೀಗ ಬೆಳಕಿಗೆ ಬಂದ ಮೌಜ ಮೋದಲ್ಗೊಂಡು ಕೇಸರಿ ನವಾಕಾಳಡವರೆಗೆ, ಯಾವದೇ ಮರಾಠೀ ಪತ್ರಿಕೆ ಇರಲಿ, ಅಧ ಹಿಡಿದು ಇತಿಯವರೆಗೆ ಒಂದಕ್ಷರವನ್ನೂ ಬಿಡದೆ ಭಕ್ತಿಯಿಂದ ಓದುವ ಸದ್ಗೃಹಸ್ಥರು ಬೆಳಗಾವಿಯಲ್ಲಿ ಬೇಕಾದಷ್ಟು ಜನರಿದ್ದಾರೆ. ಅದೇ ರೀತಿಯಾಗಿ ಶ್ರೀ. ಅಸ್ನೋಡಕರರ ಸೊಗಸಿನ ಕಥೆಗಳಷ್ಟೇ ಕೈ. ಹರಿನಾರಾಯಣ ಆಪಟೇಯವರ ಕಾದಂಬರಿಗಳನ್ನೂ ಪಠಣಮಾಡುವ ವಾಚಕರಿದ್ದಾರೆ. ಆದರೆ ಇಲ್ಲಿಯ ಲೇಖಕರ ಲೆಕ್ಕಣಿಕೆಗಳು ಮಾತ್ರ ಶ್ರೀ. ಅಸ್ನೋಡಕರ ಅಥವಾ ಆಪಟೆಯವರ ಲೆಕ್ಕಣಿಕೆಗಳನ್ನು ಅನುಕರಿಸಲು ಅಸಮರ್ಥವಾಗಿವೆ. ಕಾದಂಬರಿಗಳ ವಿಷಯದಲ್ಲಿ ಹೇಳುವ ಮಾತೇ ನಾಟಕಕ್ಕೂ ಅನ್ವಯಿಸುವದು. ಮಾನಾಪಮಾನ ನಾಟಕದ ಗೂಢ ಪದಗಳು, ಬಾಲಗಂಧರ್ವನ ಬಾಯಿಂದ ಕೇಳಿದಮೇಲೆಯೇ ವೇದೋಪನಿಷತ್ತುಗಳಂತೆ ವಂದ್ಯವಾಗಿವೆ. ಭಟ್ಟರು ಹೇಗೆ ಅರ್ಧ ತಿಳಿಯದಲೆ ಮಂತ್ರಗಳನ್ನು ಮುಖೋದ್ಗತವಾಗಿ ಹೇಳುತ್ತಾರೋ ಹಾಗೆಯೇ ನಾವು ಈ ಪದಗಳನ್ನು ಹೊತ್ತಿಲ್ಲದ ಹೊತ್ತಿನಲ್ಲಿ ಗುಣಗುಣಿಸುತ್ತೇವೆ. ಆದರೆ ಈ ನಾಟಕ ಪ್ರೀತಿ ಇಷ್ಟಕ್ಕೇ ಕೊನೆಗೊಂಡಿದೆಯಾಗಲಿ ಸ್ವತಂತ್ರ ನಾಟಕ ರಚನೆಯಲ್ಲಿ ಪರ್ಯವಸಾನಗೊಳ್ಳಲಿಲ್ಲ. ಕಾದಂಬರಿ ನಾಟಕಗಳದೇ ಈ ಹಣೆಬರಹವಾದಮೇಲೆ ಶಾಸ್ತ್ರೀಯ ವಿಷಯಗಳ ಮೇಲೆ ಸಾಹಿತ್ಯ ನಿರ್ಮಿತಿಯಾಗುವ ಮಾತಂತೂ ದೂರವೇ ಉಳಿಯಿತು. ಬೆಳಗಾಂವಿಯ ರೇಲ್ವೆಮಂಡಲದ ಒಂದು ಪುಸ್ತಕವು ಮಾತ್ರ ಮರಾಠಿಯಲ್ಲಿ ಪ್ರಕಟವಾಯಿತು. ಕನ್ನಡದಲ್ಲಿಯೂ ಇದರದೊಂದು ಆವೃತ್ತಿಯು ಹೊರಟಿದ್ದರಿಂದ ಇದಕ್ಕೆ ಮರಾಠೀಸಾಹಿತ್ಯ ಕೃತಿ ಅನ್ನಲು ಬಾರದು ಎಂದು ಕೆಲವರ ಆಕ್ಷೇಪಣೆ. ಆದರೆ ಇದು ಮೂಲದಲ್ಲಿ ಮರಾಠಿಯಲ್ಲಿಯೇ ಬರೆಯಲಾಗಿದ್ದು, ಅದರ ಭಾಷಾಂತರವಷ್ಟೇ ಕನ್ನಡದಲ್ಲಾದದ್ದರಿಂದ ಇದನ್ನು ಮರಾಠೀಸಾಹಿತ್ಯದಲ್ಲಿ ಸೇರಿಸಲು ಯಾವ ಅಭ್ಯಂತರವೂ ಇಲ್ಲವೆಂದು ನಾವು ಎದೆತಟ್ಟಿ ಹೇಳು

ವೆವು. ಆದರೂ ಒಂಟಿ ಕೋಗಿಲೆಯಿಂದ ವಸಂತಮಾಸ ಹೇಗೆ ನಿರ್ಮಾಣ ವಾಗುವದಿಲ್ಲವೋ ಹಾಗೆ ಒಂದೇ ಗ್ರಂಥದಮೇಲಿಂದ ಬೆಳಗಾವಿಯಲ್ಲಿ ಮರಾಠೀ ಸಾಹಿತ್ಯ ನಿರ್ಮಾಣವಾಗುವದೆಂದು ಹೇಳುವದು ತಪ್ಪಾಗುವದು.

## ಸಾಹಿತ್ಯದ ದುರ್ಭಿಕ್ಷೆಗೆ ಕಾರಣ

ಮೇಲೆ ಹೇಳಿದ ಸಾಹಿತ್ಯದ ಅಭಾವಕ್ಕೆ ಅನೇಕ ಕಾರಣಗಳಿವೆ ಅವುಗಳಲ್ಲಿ ಕೆಲವನ್ನೇ ಇಲ್ಲಿ ಉಲ್ಲೇಖಿಸುತ್ತೇನೆ ಒಂದು ಭಾಷೆಯಲ್ಲಿ ಸಾಹಿತ್ಯ ನಿರ್ಮಾಣವಾಗುವದಕ್ಕೆ ವಿಶಿಷ್ಟ ತರದ ವಾತಾವರಣವು ಅಗತ್ಯ; ಅಂಥ ವಾತಾವರವು ಬೆಳಗಾಂವಿಯಲ್ಲಿಲ್ಲ ಎಂದು ನಮ್ಮ ಅಭಿಪ್ರಾಯ. ಪುಣೆಯ ಸುತ್ತುಮುತ್ತಲೂ ಹಬ್ಬಿರುವ ಬೆಟ್ಟದಮೇಲೆ ನಿಂತು, ಯಾವ ಸಾಹಿತ್ಯಕ ನಾದರೂ ಸಿಂಹಗಡದಕಡೆಗೆ ದೃಷ್ಟಿಯನ್ನು ಚೆಲ್ಲಿದರೆ ಅವನಿಗೆ ಕೂಡಲೆ 'ಗಡ ಆಲಾ ಪಣ ಸಿಂಹ ಗೇಲಾ' ಎಂಬ ಕಾದಂಬರಿಯನ್ನು ಬರೆಯುವ ಸ್ಫೂರ್ತಿಯಾಗುತ್ತದೆ. ಅದರಂತೆಯೇ ಶನಿವಾರ ವಾಡೆಯನ್ನು ನೋಡುವವನಿಗೆ ಬಾಜೀರಾವ್ ಮಸ್ತಾನಿ ಇಲ್ಲವೆ ರಾಘೋಬಾದಾದಾನ ಅಣ್ಣತಮ್ಮಂದಿರ ಜಗಳದ ಸ್ಮರಣೆಯಾಗುತ್ತದೆ. ನಾಮಶೇಷವಾದ ಬುಧವಾರವಾಡೆಯನ್ನು ನೋಡಿದವರಿಗೆ ವಾಸುದೇವ ಬಳವಂತ ಫಡಕೆಯ ಬಂಡಾಯದ ನೆನಪಾಗದೆ ಇರದು. ಈ ಸ್ಥಿತಿ ಬೆಳಗಾವಿಗಿಲ್ಲ. ಮರಾಠಿಗರ ಮತ್ತು ಪೇಶವೆಯರ ಇತಿಹಾಸಗಳೇ ನಮ್ಮ ಲಕ್ಷ್ಯವನ್ನು ಹೆಚ್ಚಾಗಿ ಸೆಳೆದದ್ದರಿಂದ ಬೆಳಗಾವಿಯ ಪ್ರಾಚೀನ ಇತಿಹಾಸವನ್ನು ನಾವು ಕಣ್ಣೆತ್ತಿಸಹ ನೋಡಲಿಲ್ಲ. ಮೇಲಾಗಿ ಆ ಇತಿಹಾಸದಲ್ಲಿ ಇರುವದಾದರೂ ಏನು? ವಿಜಯನಗರದ ಆಳಿಕೆಯನಂತರ ಬೆಳಗಾವಿಯ ಇತಿಹಾಸವೆಂದರೆ ಈ ಊರು ಒಬ್ಬನ ಆಧೀನದಿಂದ ಇನ್ನೊಬ್ಬನ ಆಧೀನಕ್ಕೆ ಹೋದದ್ದೇ ಕಂಡು ಬರುವದು. ಮಲೆನಾಡಿನ ಮರ ಹೇಗೆ ಬೆಳವಲದಲ್ಲಿ ಬೆಳೆಯುವದಿಲ್ಲವೋ ಹಾಗೆ ಇಲ್ಲಿ ಮರಾಠೀ ಸಾಹಿತ್ಯದ ಗತಿ ಆಗಿದ್ದರೆ ಆಶ್ಚರ್ಯಪಡುವ ಕಾರಣವಿಲ್ಲ.

ಅದರಂತೆಯೇ, ನಾವು ಕರ್ತೃತ್ವಹೀನರು, ನಮ್ಮ ಕೈಯಿಂದ ಯಾವ ಮಹತ್ಕಾರ್ಯವೂ ಆಗಲಾರದು, ಮಹಾರಾಷ್ಟ್ರೀಯರೇ ನಮ್ಮ ಮಾರ್ಗ

ದರ್ಶಕರಾಗಬೇಕು, ನಾವುಮಾತ್ರ ಕೇವಲ ಅವರನ್ನು ಅನುಕರಿಸುವದಕ್ಕೇ ತಕ್ಕವರು. ನಮ್ಮಕಿಂತಲೂ ಅವರು ಶ್ರೇಷ್ಠರು ಎಂಬ ಭಾವನೆ ಯಾವದಕ್ಕೆ ಇಂಗ್ಲೀಷಿನಲ್ಲಿ Inferiority Complex (ಸ್ವಯಂ ತುಚ್ಛತೆಯ ಭಾವನೆ) ಎಂದು ಹೇಳುವರೊ ಅದು ನಮಗೆ ಬಡಿದು ಕೊಂಡಿದೆ. ನಮ್ಮಲ್ಲಿಯ ಸಾಹಿತ್ಯದ ಅಭಾವಕ್ಕೆ ಇದೂ ಒಂದು ಕಾರಣವಾಗಿರಬಹುದು.

ಇನ್ನೊಂದು ಕಾರಣವನ್ನೂ ಹೇಳಬಹುದು. ನಮ್ಮ ಮರಾಠೀ ವಾಚನವು, ಕಾದಂಬರಿ, ನಾಟಕ ಮತ್ತು ವರ್ತಮಾನಪತ್ರ ಇವುಗಳನ್ನು ದಾಟಿ ಮುಂದೆ ಹೋಗಿಲ್ಲ. ಅಂತೆಯೇ ಅದು ನಮ್ಮ ಮೆದುಳಿನಲ್ಲಿ ರಸವಾಗಿ ಬೆರೆತಿಲ್ಲ. ಇತ್ತ ನಮಗೆ ಸರಿಯಾಗಿ ಕನ್ನಡ ಮಾತನಾಡುವದಕ್ಕೂ ಬಾರದು, ಇತ್ತ ಮರಾಠಿ ಬರೆಯುವದಕ್ಕೂ ಬಾರದು ಹೀಗೆ ಕರುಣಾಜನಕವಾಗಿದೆ ನಮ್ಮ ಸ್ಥಿತಿ

ಇವೆಲ್ಲದರ ಜತೆಗೆ ನಾಲ್ಕನೆಯದೊಂದು ಕಾರಣ ಇರುವ ಸಂಭವವೂ ಇದೆ. ಅದು ಯಾವದೆಂದರೆ ಶ್ರಮವಿಭಾಗದ ತತ್ವ ಸಾಹಿತ್ಯ ಕ್ಷೇತ್ರದಲ್ಲಂತೂ ಇದು ಪೂರ್ಣತ್ವಕ್ಕೇ ಮುಟ್ಟಿದೆ ಲೇಖಕ ಬೇರೆ, ಮುದ್ರಕ ಬೇರೆ, ಪ್ರಕಾಶಕ ಬೇರೆ ಈ ಮೂರು ವಿಭಾಗಗಳಂತೂ ಸರಿಯೆ ಮುಂದೆ ಸಾಹಿತ್ಯದ ಪ್ರಸಾರದ ದೃಷ್ಟಿಯಿಂದ ಪುಸ್ತಕವನ್ನು ಕೊಳ್ಳುವವರು ಬೇರೆ, ಅದನ್ನು ಓದುವವರು ಬೇರೆ ಮತ್ತು ಅವರಲ್ಲಿ ಬರದಂತೆ ಆಚರಿಸುವವರು ಬೇರೆ, ಹೇಗೆ ಮತ್ತೆ ಈ ಶ್ರಮವಿಭಾಗ ಪರಂಪರೆ ಮುಂದರಿದದ್ದು ಕಂಡುಬರುವದು ಈ ತತ್ತ್ವಕ್ಕನುಸಾರವಾಗಿ ನಮ್ಮ ಕಡೆಗೆ ಪುಸ್ತಕಗಳನ್ನು ಕೊಳ್ಳುವದು ಮತ್ತು ಅವನ್ನು ಓದುವದು ಇವೆರಡೇ ಕೆಲಸಗಳು ಬಂದಿರಬೇಕು ಎಂದೆನಿಸುವದು.

ಮೇಲಿನ ಕಾರಣಗಳನ್ನೆಲ್ಲ ತೂಗಿ ನೋಡಲಾಗಿ ನಮಗೆ ಮನವರಿಕೆಯಾಗುವ ಮಾತು ಇದು: ಕರ್ನಾಟಕದ ವಾತಾವರಣದಲ್ಲಿ ಮರಾಠೀ ಸಾಹಿತ್ಯ ಹುಟ್ಟೀತು ಎಂದು ಅಪೇಕ್ಷಿಸುವದೆಂದರೆ ಹುಣಸೆಯ ಟೊಂಗೆಗೆ ಮಾವಿನ ಅಂಟುಮಾಡಿ ಅದರಿಂದ ಮಧುರ ಫಲವನ್ನು ಅಪೇಕ್ಷಿಸಿದಂತೆಯೇ ಇದೆ

ನಮ್ಮ ನ್ಯೂನತೆಯ ವಿವೇಚನೆಯನ್ನು ಇಷ್ಟೊಂದು ಕೂಲಂಕಷವಾಗಿ ಮಾಡಿದ ಕಾರಣವಿಷ್ಟೇ: ಬೆಳಗಾವಿಯ ಜನರು ಮರಾಠೀ ಸಾಹಿತ್ಯ ಪರಿಷತ್ತು

ನ್ನೇನೋ ಕರೆದರು, ಆದರೆ ಅವರಲ್ಲಿ ಮಾದರಿಗೂ ಒಬ್ಬ ಗ್ರಂಥಕರ್ತನಿಲ್ಲವಲ್ಲ ಎಂದು ನೀವು ಟೀಕೆಮಾಡಬಾರದೆಂಬುದೇ ನನ್ನ ಉದ್ದೇಶ. ಭಕ್ತಿಮಾರ್ಗದಲ್ಲಿ ಭಗವಂತನ ದಾಸರ ದಾಸರು ಅಥವಾ ದಾಸಾನುದಾಸರು ಹೇಗೆ ಇರುವರೊ, ಹಾಗೆ ನೀವು ಸಾಹಿತ್ಯಸೇವಕರಾದರೆ, ಸಾಹಿತ್ಯಸೇವಕರ ಸೇವಕರು ನಾವು ಎಂದು ವಿನಮ್ರಭಾವದಿಂದ ಹೇಳಿಕೊಳ್ಳುತ್ತೇವೆ.

ನಮ್ಮ ಕನ್ನಡ ಮಿತ್ರರು ನಮ್ಮ ಮರಾಠಿಯ ಅಭಿಮಾನಕ್ಕಾಗಿ ನಮ್ಮನ್ನು ದೂಷಿಸುತ್ತಾರೆ ಹತ್ತುತ್ತು ತಲೆಮಾರುಗಳು ಕರ್ನಾಟಕದಲ್ಲಿ ಕಳೆದರೂ, ನಮ್ಮ ಅಸ್ತಿತ್ವವೇ ಕರ್ನಾಟಕದ ಮೇಲೆ ಅವಲಂಬಿಸಿದ್ದರೂ, ನಾವಿನ್ನೂ ಮಹಾರಾಷ್ಟ್ರದ ಅಭಿಮಾನಿಗಳಾಗಿರುವದನ್ನು ನೋಡಿ ಅವರು ಆಶ್ಚರ್ಯಪಡುತ್ತಾರೆ. ನಾವು ಮಹಾರಾಷ್ಟ್ರದ ಅಭಿಮಾನಿಗಳೆಂದು ಹೇಳಿಕೊಳ್ಳಲು ನಮಗೂ ಗೌರವವೆನಿಸುತ್ತದೆ. ಈ ವಿಷಯದಲ್ಲಿ ಮರಾಠೀ ರಾಜ್ಯದ ಸಂಸ್ಥಾಪಕನಾದ ಶಿವಾಜಿ ಕೂಡ ನಮ್ಮಿಂದ ಪಾಠಕಲಿಯುವ ಹಾಗಿದೆ. ಯಾಕಂದರೆ ಶಿವಾಜಿ ಮಹಾರಾಜನ ಮೂಲಪುರುಷ ಸುಜಿನ ಸಿಂಹನೆಂಬವನು ರಜಪೂತಸ್ಥಾನದವನು. ತಾನು ರಜಪೂತನೆಂಬುದದನ್ನು ಮರೆತು, ಮರಾಠರ ರಾಜನೆನಿಸಿಕೊಳ್ಳುವದೇ ಭೂಷಣ ಎಂದು ಶಿವಾಜಿ ಭಾವಿಸಿದನು ರಾಮದಾಸರು ಕೂಡ 'ಮರಾಠಾ ತಿತುಕಾ ಮೇಳವಾವಾ' ಎಂದು ತಪ್ಪು ಉಪದೇಶವನ್ನೇ ಮಾಡಿದರು ಈ ಕಾಲದಲ್ಲಿ ಶಿವಾಜಿ ಮಹಾರಾಜರು ಬದುಕಿ ಇದ್ದರೆ ಅಥವಾ ನಾವು ಯಾರಾದರೂ ಅವರ ಕಾಲದಲ್ಲಿ ಜನ್ಮಿಸಿದ್ದರೆ ರಾಜಪುತಾನೆಯಿಂದ ಶಿಕ್ಷಕನನ್ನು ಕರೆಯಿಸಲು ಅವರಿಗೆ ಸಲಹೆ ಕೊಡುತ್ತಿದ್ದೆವು ಆದದ್ದಾಗಿ ಹೋಯಿತು. ಈಗ ಆ ಮಾತನಾಡಿ ಏನು ಪ್ರಯೋಜನ? ಶಿವಾಜಿಮಹಾರಾಜರೂ ಅವರ ಪೂರ್ವಜರೂ ಮರಾಠರೊಡನೆ ಸಮರಸರಾಗಿದ್ದರೆಂಬ ಮಾತು ಸುಳ್ಳಲ್ಲ.

## ಕೇಸರಿಕಾರರ ಅಭಿನಂದನ

ಇತ್ತೀಚೆ ಆರೇಳು ವರ್ಷ ದೇಶಸೇವೆಯ ಬಿರುಗಾಳಿಯೇ ಎದ್ದಿದೆ. ಆ ಝಂಜಾವಾತದಲ್ಲಿ ಸಿಕ್ಕು ನಾವು ಕೂಡ ಕನ್ನಡಿಗರೊಡನೆ ಎಲ್ಲಿ ಬೆರೆತು

ಹೋಗುತ್ತೇವೋ ಎಂದು ಹೆದರಿಕೆಯುಂಟಾಗಿತ್ತು. ಆದರೆ ಈ ಸಂಕಟ ದೊಳಗಿಂದ ಕೇಸರೀಕಾರರು ಹಾಗು ಅವರಂಥ ಇತರ ಮಹಾರಾಷ್ಟ್ರೀಯ ಮಿತ್ರರು ನಮ್ಮನ್ನು ಪಾರುಮಾಡಿದರು.

ಲೋಕಮಾನ್ಯರು ಜೀವಿಸಿರುವಾಗ ಅವರ ಕೇಸರೀ ಪತ್ರಿಕೆ ಜನರಿಗೆ ಮಾರ್ಗದರ್ಶಕ, ಸರಕಾರಕ್ಕೆ ಲೋಕಮತ ನಿದರ್ಶಕ ಎಂಬ ರೀತಿಯಲ್ಲಿ ನಡೆದಿತ್ತು. ಆದರೆ ಈಗ ಆ ಸ್ಥಿತಿ ಇಲ್ಲ. ಬಹುಕಾಲದಿಂದ ಗೋಪುರದಲ್ಲಿ ದೊಡ್ಡ ಗಡಿಯಾರವನ್ನಿಟ್ಟು, ಅದು ಆಮೇಲೆ ನಿಂತುಹೋದರೆ, ಹಾಯ್ದಾಡುವ ಜನರು ಪುನಃ ಪುನಃ ಮರೆವಿನಿಂದ ಅದರ ಕಡೆಗೇ ಹೇಗೆ ನೋಡುವರೊ ಆ ರೀತಿಯಾಗಿ ಲೋಕಮಾನ್ಯರು ನಿಧನಹೊಂದಿದ ಮೇಲೂ ಅವರ ಕೇಸರಿ ತಮಗೆ ಮಾರ್ಗದರ್ಶಕವಾಗಬಹುದೆಂದು ಜನರು ಈಗಲೂ ಇಚ್ಛಿಸುತ್ತಾರೆ ದುರ್ದೈವದಿಂದ ಈ ಅವರ ಇಚ್ಛೆ ಸಫಲವಾಗುವದಿಲ್ಲ ಎಂದು ಬೇರೆ ಹೇಳುವ ಕಾರಣವಿಲ್ಲ ಸರಕಾರಕ್ಕೆ ತಿಳಿವಳಿಕೆ ಕೊಡುವ ಕಾರ್ಯವು ಸಹ ಕೇಸರಿ ಯಿಂದ ಈಗ ಆಗುತ್ತಿಲ್ಲ. ಪಾರಜ ಹಾರಿದ ಕನ ಡಿಯಂತೆ ಅದು ನಿರುಪ ಯುಕ್ತವಾಗಿದೆ. ಆದರೆ ನಮ್ಮ ಮಟ್ಟಿಗೆ ಅದು ನಿಜವಾಗಿಯೇ ಉಪಕಾರಿ ಯೆನಿಸಿಕೊಂಡಿದೆ. ತನ್ನ ಸ್ವಂತ ಖರ್ಚಿನಿಂದ ಕರ್ನಾಟಕದಲ್ಲಿ ಒಬ್ಬ ಸುದ್ದಿ ಗಾರನನ್ನಿಟ್ಟು, ಕರ್ನಾಟಕದ ಯಾವ ಮೂಲೆಯಲ್ಲಿ ಏನೇ ಕೊಳೆ ಇದ್ದರೂ ಅದನ್ನು ಪ್ರತಿವಾರ ತಪ್ಪದೆ ಪ್ರಕಟಿಸಿ, ಕರ್ನಾಟಕದ ಕಡೆಗೆ ಪ್ರೇಮಾದರ ಗಳಿಂದ ನೋಡುವ ನಮ್ಮ ಪ್ರವೃತ್ತಿಯಿಂದ ಪರಾವೃತ್ತಿಗೊಳಿಸುವ ಪುಣ್ಯ ಕಾರ್ಯಮಾಡಿದ್ದಾರೆ. ಟೈಮ್ಸ್ ಪತ್ರಿಕೆಯವರು 'Through Indian eyes ಎಂಬ ಶಿರೋನಾಮದ ಕೆಳಗೆ ಯಾವ ಸಂಗತಿಗಳನ್ನು ಬರೆದು ತಮ್ಮ ವರಿಗೆ ಉಪಕಾರ ಮಾಡುತ್ತಿದ್ದಾರೋ ಅದೇ ಬಗೆಯಲ್ಲಿ ಕೇಸರಿಕಾರರು 'ಕರ್ನಾ ಟಕದ ಬಾತಮೀಪತ್ರ' ಪ್ರಸಿದ್ಧಿಸಿ ನಮ್ಮ ಮೇಲೆ ಉಪಕಾರ ಮಾಡುತ್ತಿದ್ದಾರೆ 'ನಿಂದಕರ ಮನೆ, ನೆರೆಯಲ್ಲಿರ ಬೇಕು' ಎನ್ನುವದರ ಬದಲಾಗಿ ನಿಂದಕ ಪತ್ರಿಕೆ ಎಂದರೆ ಕೇಸರಿ' ಎನ್ನುವಂತಾಗಿದೆ ಕನ್ನಡಿಗರು! ಕೇಸರಿಯ ಬರೆವಣಿಗೆಯಿಂದ ಕನ್ನಡಿಗರ ಹಾಗು ಕರ್ನಾಟಕದೊಳಗಿನ ಮರಾಠಿಗರ ಹಿತಸಂಬಂಧಗಳು ಒಂದೇ ಎಂಬ ಭಾವನೆಯಳಿದು, ನಮ್ಮ ವೈಶಿಷ್ಟ್ಯವನ್ನು ಉಳಿಸಿಕೊಳ್ಳಲು ಸಹಾಯಕವಾಗಿದೆ. ಹಿಂದುಸ್ಥಾನದಲ್ಲಿ ಇಂಗ್ಲೀಷರು ಯಾವ ವಿಧವಾಗಿ ಇರು

ತ್ತಾರೋ ಹಾಗೆಕರ್ನಾಟಕದಲ್ಲಿ ನಾವು ಇರುತ್ತೇವೆ ಎಂದು ಅನೇಕರು ತಿಳಿಯು ತ್ತಾರೆ; ಆದರೆ ಇದು ಸಂಪೂರ್ಣ ಯೋಗ್ಯ ಎಂದು ಯಾರೂ ಭಾವಿಸಕೂಡದು

ಈ ವಾದದಲ್ಲಿ ಕೇಸರಿಕಾರರ ಆಭಾರ ಮನ್ನಸುವದು ಮತ್ತು ಅವರನ್ನು ಅಭಿನಂದಿಸುವದು ಮರೆತು ಹೋದೀತು. ಯಾವದೇ ಮಾತು, ಮತ, ಹಾಗು ಠರಾವುಗಳನ್ನು ಸುಲಭ ಹಾಗು ಸುಸ್ಪಷ್ಟವಾದ ಭಾಷೆಯಲ್ಲಿ ಇಡದೆ ಅನೇಕ ತೊಡಕಿನ ಸಂಯುಕ್ತ ಕ್ರಿಯಾಪದಗಳನ್ನೂ, ಸಾಮಾಸಿಕ ಪದಗಳನ್ನು ಬಳಸಿ ಬೇಕಾದ ಅರ್ಥವು ಹೊರಡುವಂತೆ ಬರೆಯುವ ಪದ್ಧತಿಯನ್ನು ಪ್ರಾರಂಭಿಸಿ ದ್ದಕ್ಕಾಗಿ ಈ ಪರಿಷತ್ತು ಅವರನ್ನು ಅಭಿನಂದಿಸದೆ ಇರಲಾರದು. ಯಾಕಂದರೆ ಈ ಲೇಖಪದ್ಧತಿ ಬಳಸಿದ್ದಕ್ಕಾಗೆಯೇ ಪತ್ರಿಕೆಯ ಆಕಾರ ಬೆಳೆಯಿಸಬೇಕಾಯಿ ತೆಂಬದನ್ನು ಅನೇಕರು ಬಲ್ಲರು. ಅವರು ಹಣವನ್ನು ಸದುಪಯೋಗಕ್ಕೆ ಹಚ್ಚಿ ಕರ್ನಾಟಕದಲ್ಲಿ ಸ್ವತಂತ್ರ ಒಬ್ಬ ಸುದ್ದಿಗಾರನ ಸ್ಥಾನವನ್ನು ನಿರ್ಮಿಸಿ, ಅವನು ಕಳಿಸುವ ಸುದ್ದಿ ಸಮಾಚಾರಗಳನ್ನು ಕಾಲಕಾಲಕ್ಕೆ ಕೇಸರಿಯಲ್ಲಿ ಪ್ರಕಟಿಸಿದ ಮಹೋಪಕಾರಕ್ಕಾಗಿ ಕರ್ನಾಟಕ ಮರಾಠಿಗರ ವತಿಯಿಂದ ನಾನು ಅವರ ಆಭಾರ ಮನ್ನಿಸುತ್ತೇನೆ

ಸರಸ್ವತಿಯ ಪೂಜಕರೆ, ಇಂದಿನ ಮಂಗಲ ಪ್ರಸಂಗದಲ್ಲಿ ಇನ್ನೊಂದು ಸಮಾಧಾನದ ಸಂಗತಿಯನ್ನುಲ್ಲೇಖಿಸದೆ ಇರಲಾರೆ. ಸರಕಾರೀ ನವಕರಿಗಳಿ ಗಾಗಿ ಮತ್ತು ಲೋಕನಿಯುಕ್ತ ಸಭೆಗಳಲ್ಲಿಯ ಪ್ರೊಳ್ಳು ಗೌರವದ ಸ್ಥಾನಗಳಿ ಗಾಗಿ ನಮ್ಮ ಬ್ರಾಹ್ಮಣ ಬ್ರಾಹ್ಮಣೇತರರಲ್ಲಿ ತಿಕ್ಕಾಟಗಳುಂಟಾಗುವ ಮಾತು ಸುಪ್ರಸಿದ್ಧ! ಆದರೆ ಈ ಸಾಹಿತ್ಯ ಪರಿಷತ್ತಿನ ಮಟ್ಟಿಗೆ ನಾವು ಬ್ರಾಹ್ಮಣ ಮತ್ತೂ ಬ್ರಾಹ್ಮಣೇತರರು ಒಂದಾಗಿ ಸರಸ್ವತಿಯ ರಥವನ್ನು ಜೋಡಿಯಿಂದ ಎಳೆಯಲು ಹೆಗಲು ಒಡ್ಡಿದ್ದೇವೆ ಎಂಬದು ಕೌತುಕಾಸ್ಪದವಾದದ್ದು! ಇರಲಿ ಮಿತ್ರರೆ, ಬೆಳಗಾಂವಿಯಲ್ಲಿ ಮರಾಠೀ ಸಾಹಿತ್ಯ ನಿರ್ಮಾಣವಾಗುವದಿಲ್ಲ ಎಂದು ಮನಸ್ಸು ಬೇಸರಮಾಡಿಕೊಳ್ಳಬೇಡಿರಿ. ಸಾಹಿತ್ಯ ಸೇವಕರ ಸೇವೆ ಯನ್ನು ಸಲ್ಲಿಸಲು ಇಲ್ಲಿ ಅಕ್ಕಿ, ತುಪ್ಪ ಸಮೃದ್ಧಿಯಾಗಿ ದೊರೆಯುತ್ತವೆ. ಇಷ್ಟಾಗಿ ಕೆಲವು ಕೊರತೆಗಳು ಇದ್ದರೆ ತಾವು ಅವನ್ನು ಗಮನಿಸಲಾರಿರಿ ಎಂದು ಆಶಿಸುತ್ತೇನೆ.

ಸದ್ಗೃಹಸ್ಥರೆ, ನನ್ನ ಭಾಷಣ ಪ್ರಮಾಣ ಮೀರಿ ಬೆಳೆಯಿತೆಂಬುದರ ಅರಿವು ನನಗಿದೆ. ಆದರೆ ಅದನ್ನು ಮುಗಿಸುವ ಪೂರ್ವದಲ್ಲಿ ಸ್ವಾಗತಮಂಡಳದ ಪರವಾಗಿ ೩-೪ ಅವಶ್ಯಕ ಠರಾವುಗಳನ್ನು ಸ್ವಲ್ಪದರಲ್ಲಿ ವಿವೇಚಿಸುತ್ತೇನೆ.

ಒಂದನೆಯ ಠರಾವು ಹೀಗಿರಬೇಕು:—ಪುಣೆ ಅಥವಾ ಮಹಾರಾಷ್ಟ್ರದ ಯಾವದೇ ಭಾಗದಲ್ಲಿ ಗುಜರಾಥೀ ಸಾಲೆ ಸ್ಥಾಪಿತವಾದರೆ, ಯಾವ ತತ್ತ್ವದ ಮೇಲೆ ಅದನ್ನು ವಿರೋಧಿಸಲಾಗುವದೋ ಅದೇ ತತ್ತ್ವದ ಮೇಲೆ ಕರ್ನಾಟಕದಲ್ಲಿ ಸ್ಥಾಪಿತವಾಗುವ ಮರಾಠಿ ಸಾಲೆಯನ್ನು ವಿರೋಧಿಸುವದು ಶುದ್ಧ ಅನ್ಯಾಯದ್ದೂ ದ್ವೇಷಮೂಲಕವಾದದ್ದೂ ಎಂದು ಈ ಪರಿಷತ್ತಿನ ಪ್ರಾಮಾಣಿಕ ಅಭಿಪ್ರಾಯವಿದೆ ಇಂಥ ಠರಾವನ್ನು ಯಾಕೆ ಮಾಡಬೇಕೆಂಬುದರ ಕಾರಣಗಳನ್ನು ನಾನು ಇಲ್ಲಿ ಚರ್ಚಿಸುವದಿಲ್ಲ. ನಮಗೆ ಒಪ್ಪಿಗೆಯಾದ ವಿಷಯ ಇನ್ನೊಬ್ಬರಿಗೂ ಒಪ್ಪಿಗೆ ಯಾದೀತೆಂದು ಹೇಳಲು ಬರುವದಿಲ್ಲ ಇನ್ನು ನಾನು ಸೂಚಿಸುವ ಎರಡನೆಯ ಠರಾವು ಅಷ್ಟು ವಾದಗ್ರಸ್ತವಾಗಿಲ್ಲ ಅದು ಹೇಗೆ:—ಮರಾಠೀ ಸಾಹಿತ್ಯದ ವಿಶೇಷ ಪ್ರಸಾರಕ್ಕಾಗಿ ಮುಂದಿನ ಮೂರು ವರ್ಷಗಳ ಮರಾಠೀ ಸಾಹಿತ್ಯ ಸಮ್ಮೇಲನಗಳನ್ನು ಅನುಕ್ರಮವಾಗಿ ಅಂದಮಾನ, ಫಿಜಿ ನಡುಗಡ್ಡೆಗಳು ಹಾಗು ದಕ್ಷಿಣ ಆಫ್ರಿಕಾ ಈ ಭಾಗಗಳಲ್ಲಿ ನೆರೆಯಿಸಬೇಕು. ಮತ್ತು ಅದಕ್ಕಾಗಿ ಅಲ್ಲಿ ವಾಸವಾಗಿರುವ ಮರಾಠಿಗರೊಡನೆ ಈಗಿನಿಂದಲೇ ಪತ್ರವ್ಯವಹಾರವನ್ನು ಪ್ರಾರಂಭಿಸಬೇಕು.

ನಾನು ಈಗ ಸೂಚಿಸುತ್ತಿರುವ ಮೂರನೆಯ ಠರಾವು ಸರ್ವರಿಗೂ ರುಚಿಸೀತು ಎಂದು ಹೇಳಲಾರೆ. ಕಾರ್ಯದ ಮಹತ್ವವನ್ನು ಲಕ್ಷಿಸಿದರೆ ಈ ಠರಾವುಕೂಡ ಸ್ವೀಕೃತವಾಗಬಹುದೆಂದು ಆಶಿಸುತ್ತೇನೆ. ಆ ಠರಾವು ಹೀಗಿದೆ:—ಬೆಳಗಾಂವಿ ಶಹರದಲ್ಲಿ ಮರಾಠೀ ಭಾಷೆ ಸ್ಥಿರವಾಗಿ ಉಳಿಸಿಕೊಳ್ಳುವದಕ್ಕಾಗಿ ಪ್ರತಿವರ್ಷ ಕನಿಷ್ಠ ಇಲ್ಲಿಯ ನೂರು ಹುಡುಗಿಯರನ್ನು ಮಹಾರಾಷ್ಟ್ರದ ವರರ ಜೊತೆಗೆ ವಿವಾಹ ಜರುಗಿಸಬೇಕು. ಮತ್ತು ಅದೇ ಪ್ರಕಾರ ಮಹಾರಾಷ್ಟ್ರದ ನೂರು ಹುಡುಗಿಯರನ್ನು ಬೆಳಗಾವಿ ; ಮತ್ತು ಸುತ್ತುಮುತ್ತಲಿನ ಊರುಗಳ ವರರ ಜೊತೆಗೆ ಮದುವೆಮಾಡಿಕೊಡಬೇಕು. ಇಂಥ ಹೆಣ್ಣು ಮಕ್ಕಳು ಅತ್ತೆಮನೆ ತವರುಮನೆಗಳಿಗೆ ಹೋಗುವ ಬರುವ

ಖರ್ಚು ಹೆಚ್ಚು ಬರದಂತೆ ನೋಡಿಕೊಳ್ಳುವದು ಅಗತ್ಯ. ಸಾಹಿತ್ಯ ಸಮ್ಮೇಲನದ ಅಧ್ಯಕ್ಷರ ಶಿಫಾರಸ್‌ಪತ್ರ ( Certificate ) ತೋರಿಸಿದರೆ, ಇಂಥ ಹೆಣ್ಣುಮಕ್ಕಳಿಗೆ ಅರ್ಧದರದಲ್ಲಿ ಪ್ರವಾಸಮಾಡುವ ಸೌಕರ್ಯವನ್ನು ಒದಗಿಸಲು ರೇಲ್ವೆ ಕಂಪನಿಗಳಿಗೆ ವಿನಂತಿಮಾಡಿಕೊಳ್ಳಬೇಕು. ಈ ಠರಾವನ್ನು ಇದೇ ಭಾಷೆಯಲ್ಲಿ ಮಂಡಿಸಿದರೆ ಕೆಲವರಿಗೆ ಅದುತ್ರಾಸದಾಯಕವಾಗಬಹುದು. ಕೇಸರೀಕಾರರ ಭಾಷಾ ಪದ್ಧತಿಯ ಮೇರೆಗೆ ಅದಕ್ಕೊಂದು ವಾಕ್ಯ ಹೀಗೆ ಜೋಡಿಸಬಹುದು. ' ಯಾರಿಗೆ ಈ ಠರಾವು ಒಪ್ಪಿಗೆ ಇದೆಯೋ ಅವರು ಅದನ್ನು ಆಚರಣೆಯಲ್ಲಿ ತರಲು ಶಕ್ಯವಾದರೀತಿಯಲ್ಲಿ ಪ್ರಯತ್ನಿಸಬೇಕು ಎಂದು ಈ ಪರಿಷತ್ತು ಸೂಚಿಸುತ್ತದೆ '

ಸಭ್ಯಗೃಹಸ್ಥರೆ, ನನಗೆ ಹೇಳಬೇಕಾದದ್ದನ್ನೆಲ್ಲ ಹೇಳಿದ್ದೇನೆ. ನಮ್ಮಿಂದ, ಸಾಹಿತ್ಯಭಕ್ತರ ಆದರಸತ್ಕಾರ ಆಗಬೇಕಾದ ಪ್ರಮಾಣದಲ್ಲಿ ಆಗಲಿಕ್ಕಿಲ್ಲ ಎಂಬ ಮಾತನ್ನು ನಾನು ಅರಿತಿದ್ದೇನೆ. ಆದರೂ ನಮ್ಮಲ್ಲಿ ತೋರುವ ನ್ಯೂನತೆಗಳನ್ನು ಮನಸ್ಸಿನಲ್ಲಿ ತರದೆ ನಮ್ಮ ಅಲ್ಪ ಸೇವೆಯನ್ನು ಸ್ವೀಕರಿಸುವರೆಂದು ಆಶಿಸಿ, ಪುನಃ ಒಂದು ಸಲ ತಮ್ಮೆಲ್ಲರಿಗೂ ಸ್ವಾಗತ ಬಯಸುತ್ತೇನೆ.



# ಭಾಗ ೩

## ಹರಟೆ-ಕತೆಗಳು

ಈ ಹರಟೆ ಹಾಗು ಕತೆಗಳಲ್ಲಿ ಅವರ ಹೃದಯದಲ್ಲಿಯ ಭಾವಗಳು ಹೇಗೆ ಅರಳಿವೆ ಎಂಬುದನ್ನು ನಾವು ಕಾಣಬಹುದು.

೧. ಸರಕಾರದ ಆದಾಯುನ್ನು ಹೇಗೆ ಹೆಚ್ಚಿಸಬೇಕು

೨. ಬೀಡಿ ಸೇದುವ ಸಂಸ್ಕೃತಿ

೩. ಅಮೀನಸಗಡದ ಸಂತೆ

೪. ದುರ್ಗಗಳೇ !

೫. ಐದು ಕೊಡಗಳ ಆತ್ಮಕತೆ

೬. ನನ್ನ ಸಾವು

೭. ಗೋಪಾಳ ಭಟ್ಟರ ಹುಲಿ

೮. ವಧೀಚಿ

೯. ಎಚ್ಚರಿಕೆ

# ಸರಕಾರದ ಆದಾಯುವನ್ನು ಹೇಗೆ ಹೆಚ್ಚಿಸಬೇಕು



## ( ಒಂದು ಹೊಸ ಮಾದರಿಯ ಸಲಹೆ )

ನಮ್ಮ ಬಡದೇಶದಲ್ಲಿಯ ಜನರ ಪರಿಸ್ಥಿತಿಯನ್ನು ಸುಧಾರಿಸಬೇಕೆಂಬ ಇಚ್ಛೆಯು ಸರಕಾರದ ಹೃದಯದಲ್ಲಿ ವಾಸಿಸುತ್ತಿದ್ದರೂ, ಅವರಿಗೆ ಹೆಚ್ಚು ಹೆಚ್ಚಿಗೆ ಹಣದ ಕೊರತೆಯು ಅಡ್ಡಬರುತ್ತದೆ. ಯಾವದೇ ಕೆಲಸವನ್ನು ಕೈಕೊಳ್ಳಬೇಕಾದರೂ "ಸರ್ವಾರಂಭಾಃ ತಂಡುಲಃ ಪ್ರಸ್ಥಮೂಲಾಃ" ಎಂಬ ನಾಣ್ನುಡಿಯಂತೆ ಹಣವಿಲ್ಲದೆ ಮುಂದೆ ಹೆಜ್ಜೆ ಇಡಲಾಗದು. ಹಣವಿಲ್ಲದ ಮೂಲಕವೇ ಸರಕಾರದ ಆಕಾಂಕ್ಷೆಗಳು ಪೂರ್ತಿಗೊಳ್ಳದೆ ಮನಸಿನಲ್ಲಿಯೇ ಕರಗಹತ್ತಿವೆ. ಜನರ ಹಿತಕ್ಕಾಗಿ ಕೊರಗುವ ಇಂಥ ಸರಕಾರಕ್ಕೆ ಹಣ ದೊರಕಿಸುವ ಕೆಲ ಮಾರ್ಗಗಳನ್ನು ಸೂಚಿಸಬಯಸುತ್ತೇವೆ. ಈ ಮಾರ್ಗಗಳು ಕೆಲಜನರಿಗೆ ಹೊಸವು ಕಂಡರೂ ಸರಕಾರಕ್ಕೆ ಅವೇನು ಹೊಸವಲ್ಲ. ಆದ್ದರಿಂದ ನಾವಾವರೂ ಒಳ್ಳೇ ಧೈರ್ಯದಿಂದ ಈ ಮಾರ್ಗಗಳನ್ನು ವಿವರಿಸುತ್ತೇವೆ.

ಈ ಸೂಚನೆಗಳನ್ನು ಓದಿ ಸರಕಾರಿ ನೌಕರಿಯಲ್ಲಿದ್ದ ನಮ್ಮ ಅನೇಕ ಮಿತ್ರರಿಗೆ ಸಿಟ್ಟು ಬರಬಹುದು ನೌಕರಿಯಲ್ಲಿ ಸೇರಿದಂದಿನಿಂದ ಜನರಿಂದಾಗಲೀ, ಅನ್ಯಾಯದಿಂದಾಗಲಿ ಒಂದು ಕಾಸು ಸಹ ತಕ್ಕೊಳ್ಳದೆ ಧರ್ಮರಾಜನಂತೆ ಪ್ರಾಮಾಣಿಕತನದಿಂದ ನೌಕರೀ ಮಾಡುತ್ತಿದ್ದರೂ ತಮ್ಮ ಬಗ್ಗೆ ಈ ಬಗೆಯ ಲೇಖನವನ್ನು ಓದಿದರೆ, ಕೆಲ ನೌಕರರಿಗೆ ಕೆಡಕೆನಿಸುವದು ಸಹಜವದೆ. ಇಂಥ ನೌಕರ ಜನರು ಈ ನಮ್ಮ ಕಲಿಯುಗದಲ್ಲಿ ಅಪವಾದಾತ್ಮಕವಾಗಿರುವರು. ನಿಜವಾಗಿ ಅವರು ದ್ವಾಪರ ಅಥವಾ ಕೃತಯುಗದಲ್ಲಿ ರಾಮರಾಜರ ಅಥವಾ ಧರ್ಮರಾಜರ ಸಂಸ್ಥಾನದಲ್ಲಿ ನೌಕರರಾಗಿರಬೇಕಾಗಿತ್ತು. ಈ ನಮ್ಮ ಕಲಿಯುಗದಲ್ಲಿ ಅವರಿಗೆ ಸ್ಥಾನವೇ ಇಲ್ಲ. ಅವರು ಈಗ ನೌಕರಿ

ಮಾಡುವದೆಂದರೆ ಚಹಾದಲ್ಲಿ ಉಪ್ಪು ಹಾಕಿದಂತೆ ವಿಸಂಗತವಾಗುವದು. ಇರಲಿ.

ನಾವು ಈ ಲೇಖದಲ್ಲಿ ಸರಕಾರೀ ನೋಕರರು ಲಂಚವನ್ನು ಸಾಕಷ್ಟು ಹೊಟ್ಟೆತುಂಬಿ ಮನೆ ತುಂಬುವವರೆಗೆ ತಿಂಬುವರೆಂದು ಕಾಣಿಸಿದ್ದೇವೆ. ಜನರು ತಾವಾಗಿಯೇ ಕೊಟ್ಟರೆ ಹೇಗೆ ಬಿಡಬೇಕು ? ಗಂಗಾಪ್ರವಾಹ ಹರಿದು ಕೊಂಡು ಮೈಮೇಲೆ ಬಂದರೆ, ಗಂಗಾಸ್ನಾನದ ಪುಣ್ಯವನ್ನು ಪಡೆಯಲಿಕ್ಕೇ ಬೇಕು. ಅಲ್ಲದೆ ಹೋದರೆ ಹೇಡಿಯೆಂದು ಹುದ್ದೆ ದೊರೆಯುವದು. ಹೀಗೆ ಎಷ್ಟೋ ಅಧಿಕಾರಿಗಳು ಅನ್ನುವದುಂಟು. ನಾವಾದರೂ ಈ ಮಾತನ್ನು ಅರಿತುಕೊಂಡೇ ಸೂಚನೆಗಳನ್ನು ಕೊಟ್ಟದ್ದೇವೆ.

ತಮ್ಮ ಎಲ್ಲ ನೋಕರದಾರರ ಪಗಾರವು ಪ್ರತಿ ತಿಂಗಳ ಲಕ್ಷಗಟ್ಲೆ ಆಗುವ ದೆಂದೂ, ಮತ್ತು ತುಟ್ಟೀ ಕಾಲದಲ್ಲಿ ಆ ಪಗಾರವನ್ನು ಅಷ್ಟೇ ಅಲ್ಲ ಪೆನಶನ್ ಜನರ ಪೆನಶನ್ ಹೆಚ್ಚಿಸಿದ್ದರಿಂದ ಪ್ರತಿ ತಿಂಗಳಿಗೆ ಸರಕಾರಕ್ಕೆ ಲಕ್ಷಗಟ್ಟಲೆ ವೆಚ್ಚವಾಗುವದೆಂಬುದು ಸಹಜ. ಆದರೆ ಈ ಪಗಾರದ ವೆಚ್ಚವೇ ಈ ಕಾಲದಲ್ಲಿ ಸರಕಾರದ ಮೇಲೆ ಬೀಳತಕ್ಕದಲ್ಲವೆಂದು ನನ್ನ ಮತ.

ಅದು ಬೇರೆ ಬೇರೆ ಖಾತೆಗಳಲ್ಲಿಯ ಬೇರೆ ಬೇರೆ ಹುದ್ದೇದಾರರ ಯಾದೀ ಮಾಡತಕ್ಕದ್ದು. ಮತ್ತು ಆಯಾ ಹುದ್ದೆಯ ಮುಂದೆ ಅವರವರ ಯೋಗ್ಯತೆಯ ಪ್ರಕಾರ ದೊಡ್ಡ ಸಣ್ಣ ರಕಮು ಕಾಣಿಸಬೇಕು. ಈ ಹಣವು ಸೆರೆಸಿಂದಿಗಳ ಲಿಲಾವುಗಳಲ್ಲಿ ಸರಕಾರಿ ಸವಾಲದಂತೆ ಒಂದು ಅಂಕಿ ಗೊತ್ತುಮಾಡಿರುತ್ತದೆ. ಅಂದರೆ ಕನಿಷ್ಟ ಪಕ್ಷಕ್ಕೆ ಅಷ್ಟಾದರೂ ಬರಬೇಕೆಂದು ಸರಕಾರದ ಆಶೆಯಿರು ತ್ತದೆ. ಮತ್ತು ಈ ರಕಮಿಗೆ ಜೋಡಿ, ಯಾವನು ಲಿಲಾವಿನಲ್ಲಿ ಆ ಹುದ್ದೆಯ ಮಕ್ತೆ ಹಿಡಿಯುವನೋ ಅವನಿಗೆ ಆ ಹುದ್ದೆಯ ಮಕ್ತೆ ಕೊಡತಕ್ಕದ್ದು. ಒಂದೇ ಸ್ಥಳದಿಂದ ಅಥವಾ ಒಂದೇ ಹುದ್ದೇದಿಂದ ಮೇಲಿಂದ ಮೇಲೆ ಬದಲೀ ಮಾಡಿದರೆ, ಆ ಹುದ್ದೇದಾರನಿಗೆ ಅದರ ಫಾಯದೆ ಸಾಕಷ್ಟು ಮುಟ್ಟುವದಿಲ್ಲ. ಆದ್ದರಿಂದ ಈ ಮಕ್ತೆಗಳ ಲಿಲಾವುಗಳನ್ನು ಮೂರುವರ್ಷದ ಬಗ್ಗೆ ಮಾಡ ತಕ್ಕದ್ದು. ಮೂರು ವರ್ಷ ಕಳೆದ ಮೇಲೆ ಲಿಲಾವುದಾರನಿಗೆ ಲಿಲಾವಿನಲ್ಲಿ ಬೇರೆ ಸ್ಥಳದಲ್ಲಿಯ ಬೇರೆ ಹುದ್ದೆಗಳನ್ನು ಬೇಡಲಿಕ್ಕೆ ಪರವಾನಗಿ ಕೊಡಬೇಕು.

ಯಾಕೆಂದರೆ ನಮ್ಮ ಜಿಲ್ಲೆಯಲ್ಲಿಯೇ ನೋಡಿದರೆ ಜಿಲ್ಲೆಯ ಸ್ಥಳವನ್ನು ಬಿಟ್ಟು ದೂರಯಿದ್ದ ಠಾಣೆಗಳಲ್ಲಿ ಫೌಜದಾರ, ಹವಾಲ್ದಾರ, ನಾಯಿಕ, ಮುಂತಾದವರು ಹೆಚ್ಚು ಸುಖದಿಂದ ಇದ್ದಾರೆ. ಅದರಂತೆ ಲಮಾಣಿ ತಾಂಡೆಗಳ ಹತ್ತರವಲ್ಲಿದ್ದ ಅಬಕಾರೀ ಇನಸ್ಪೆಕ್ಟರರು ಹೆಚ್ಚು ಆನಂದದಿಂದ ಇದ್ದಾರೆ. ಸರಕಾರದವರು ಮಾರಲಿಕ್ಕೆ ಇಟ್ಟ ಕಡಿಮೆ ಶಕ್ತಿಯ ಸರಾಯಿ ಕುಡಿಯುವ ಪ್ರಸಂಗವು ಅವರ ಮೇಲೆ ಬರುವದಿಲ್ಲ. ಲಮಾಣೀ ಜನರು ಭಟ್ಟಿಯಿಂದ ಮಾಡಿದ ಉತ್ತಮ ಸುರಾಪಾನ ಮಾಡಿ, ಅವರ ವ್ಯಾಪಾರದಲ್ಲಿ ಪಾಲಿಟ್ಟು ಯಾವನಾದರೂ ಮೂರು ತಿಂಗಳಿಗೊಮ್ಮೆ ಆ ಜನರ ಅನುಮತಿಯಿಂದಲೇ ಒಬ್ಬನನ್ನು ಹಿಡಿದು ತಮ್ಮ ಕೆಲಸದಲ್ಲಿ ಕೃತಕೃತ್ಯರಾಗುತ್ತಾರೆ. ಈ ಎಲ್ಲ ಸಂಗತಿಗಳನ್ನು ವಿಚಾರ ಮಾಡಿದರೆ ಅದೇ ಅಮಲ್ದಾರನನ್ನು ಅದೇ ಸ್ಥಳದಲ್ಲಿ ಕಾಯಂ ಇಡುವದು, ಆತನ ದೃಷ್ಟಿಯಿಂದಾಗಲಿ ಅಥವಾ ಸರಕಾರ ದೃಷ್ಟಿಯಿಂದಾಗಲಿ ಫಾಯದೇಶೀರ ಆಗುವದಿಲ್ಲ.

ಸರಕಾರದವರು ಹೇಗೆ ಹೇಗೆ ಹೊಸ ಖಾತೇಗಳನ್ನು ನಿರ್ಮಿಸುವರೋ ಹಾಗೆ ಲಂಚಗೂಳಿತನವು ಹೆಚ್ಚಾಗಿದೆ ಈಗ ಹೊಸದಾಗಿ ಜನಿಸಿದ ಫಾರೆಸ್ಟ ಖಾತೆ ಮತ್ತು ಸೀವಾ ಖಾತೆಗಳನ್ನು ವಿಚಾರಿಸುವಾ. ಆ ಖಾತೆಯ ಕಾಯದೆಗಳು ಬಹಳ ಒತ್ತರದಿಂದ ಬದಲಾತ್ತವೆ. ಹಿಂದಕ್ಕೆ ಬಾದಶಹನ ಕಾಲಕ್ಕೆ ತಾನು ಕೆಲಸ ಮಾಡಬೇಕಾದ ಒಂದು ಕೋಟೆಯ ಕಡೆಗೆ ಹೊರಟ ಒಬ್ಬ ಸುಬೇದಾರನು ಕುದುರೆಯ ಮೇಲೆ ಬಾಲದ ಕಡೆ ಮುಖ ಕೂತಿದ್ದನಂತೆ. ತನ್ನ ಸ್ಥಳದ ಮೇಲೆ ಯಾರಾದರೊಬ್ಬ ಬೇರೆ ಜನರು ನೇಮಕವಾಗುವರೆಂದು ಅವನಿಗೆ ಅಂಜಿಕೆ ಹಾಗೆಯೇ ಈಗಾದರೂ ಪೋಲೀಸ ಖಾತೆಗಳಲ್ಲಿ ಒಂದು ಬಟ್ಟು ಹುಕುಂ ಹೊರಬಿದ್ದು ಅದು ಹಳ್ಳಿಗಳಿಗೆ ಮುಟ್ಟುವದರೊಳಗಾಗಿ ಅದರ ವಿರುದ್ಧಾರ್ಥದ ಹುಕುಂಗಳು ಹೊರಡುವವು ಹೀಗಾಗಿ ಆ ಖಾತೆಯಲ್ಲಿ ಹಳ್ಳೀ ಜನರಿಗೆ, ಇಷ್ಟೇ ಅಲ್ಲ, ನಿಜವಾಗಿ ವಕೀಲರಿಗೂ ಮತ್ತು ಮ್ಯಾಜಿಸ್ಟ್ರೇಟರಿಗೂ, ಅದರಂತೆ ಮಾಮಲೇದಾರರಿಗೂ ಮೇಲಿನಿಂದ ಹೊರಟ ಹುಕುಂಗಳು ಗೊತ್ತಿರುವದಿಲ್ಲ. ಅದರಿಂದ ಲಕ್ಷ್ಮೀವಂತನಾದ ಬೇಕಾದ ರೈತನನ್ನು ತಂದು, ಆತನ ಮೇಲೆ ಆರೋಪಗಳನ್ನು ಹೊರಿಸಿ, ಅವನನ್ನೇ ಕೋರ್ಟಿಗೆ ಎಡತಾಕ ಹಚ್ಚಲು ಅಥವಾ ಕೈದಿಯ ಕೋಣೆಯಲ್ಲಿ ಕೊಳೆಯಲು ಬಿಟ್ಟು ಬಿಡಲಿಕ್ಕೆ ಯಾವ

ಅಮಲ್ದಾರನಿಗಾದರೂ ಸಹಜವಾಗಿ ಹೋಗಿದೆ. ಯಾವ ವಸ್ತುಗಳ ದೆಸೆಯಿಂದ ಯಾವ ಬಗೆಯ ಪರವಾನಗೀ ಅವಶ್ಯಕತೆಯಿಲ್ಲವೋ ಅಂಥ ವಸ್ತುಗಳನ್ನು ಕೊಳ್ಳಲಿಕ್ಕೆ ಮಾರಲಿಕ್ಕೆ, ಜಿಲ್ಹೆಯ ಒಳಗೆ ತರಿಸಲಿಕ್ಕೆ ಅಥವಾ ಜಿಲ್ಹೆಯ ಹೊರಗೆ ಒಯ್ಯಲಿಕ್ಕೆ ಹೀಗೆ ಯಾವದೇ ಕೆಲಸಕ್ಕಾದರೂ ತಮ್ಮ ಅಪ್ಪಣೆ ಪಡೆಯಬೇಕೆಂದು ಹೇಳಿ, ಲಕ್ಷ್ಮಿಯನ್ನೆ ವಶಮಾಡಿಕೊಳ್ಳಲು ಠಾಣೆಯ ಸಿಪಾಯಿಯಿಂದ ಮಾಮಲೇದಾರರ ವರೆಗೆ ಯಾರಿಗಾದರೂ ಬರುವದು. ಇಂಥ ಕಾಯಿದೆಗಳು ಅಮಲಿನಲ್ಲಿರುವಾಗ ತಪ್ಪು ನೋಕರ ಜನರ ಸಂಬಳದ ಒಗ್ಗೆ ವೆಚ್ಚ ಮಾಡುವದೆಂದರೆ ಕೇವಲ ಹುಚ್ಚುತನದ ಕೆಲಸ. ಇದರಲ್ಲಿ ಎಷ್ಟೋ ಇನಕಂಟಾಕ್ಸ ಅಮಲ್ದಾರರ ಹೇಳಿಕೆ ಲಕ್ಷ್ಯದಿಂದ ಅಭ್ಯಸಿಸುವಂಥದಿರುತ್ತದೆ. ಒಬ್ಬ ವ್ಯಾಪಾರಿಯು ತನ್ನ ವ್ಯಾಪಾರದಲ್ಲಿ ಎರಡೇ ಸಾವಿರ ಫಾಯದೆ ಆಗಿದೆ ಎಂದು ಲೆಕ್ಕದಿಂದ ತೋರಿಸಿದರೂ ಅವನಿಗೆ ಕಳ್ಳಪೇಟಿಯಲ್ಲಿ ಕನಿಷ್ಟ ಪಕ್ಷಕ್ಕೆ ಹತ್ತುಸಾವಿರವಾದರೂ ಲಾಭವಾಗಿರಬೇಕೆಂದು ಆಕಾರದ ಪ್ರಮಾಣವನ್ನು ಗೊತ್ತುಪಡಿಸುತ್ತಾರೆ. ವ್ಯಾಪಾರಸ್ಥರು ಕಳ್ಳಪೇಟಿಯಲ್ಲಿ ಹಣ ತಿಂದರೆ ಅಮಲ್ದಾರನು ಏಕೆ ತಿನ್ನಬಾರದು ?

ಸದ್ಯಕ್ಕೆ ಇಲ್ಲಿಯ ವ್ಯಾಪಾರಸ್ಥರನ್ನು ಬದಿಗಿರಿಸಿ, ತಮ್ಮ ದೇಶದ ವ್ಯಾಪಾರಸ್ಥರಿಗೆ ಮತ್ತು ಜನರಿಗೆ ಎಲ್ಲ ಬಗೆಯ ಲಾಭ ಮುಟ್ಟಬೇಕೆಂಬ ಇಚ್ಛೆಯಿಂದ ಹಿಂದುಸ್ತಾನದಲ್ಲಿ ವ್ಯಾಪಾರ ಹೂಡಿದ ಇಂಗ್ಲಂಡದ 'United ಕಿಂಗಡಮ್ ಸರಕಾರ ಕಮರ್ಶಿಯಲ್' ( U. K. C..C ) ಅವರಿಗೆ ತಮ್ಮ ವ್ಯಾಪಾರವನ್ನು ಒಪ್ಪಿಸಿರುವದು ಎಲ್ಲರಿಗೂ ಗೊತ್ತೇ ಇದೆ. ಆದ್ದರಿಂದ ನಾವು ಹೇಳಿದ ಸೂಚನೆಯಾದರೂ ಸರಕಾರಕ್ಕೆ ಸಲ್ಲುವದೆಂದು ನಮ್ಮ ಆಶೆ.

# ಬೀಡಿ ಸೇದುವ ಸಂಸ್ಕೃತಿ

ಸಣ್ಣ ಮಕ್ಕಳು ಬೀಡಿ ಸೇದಬಾರದು. ಬೀಡಿ ಸೇದುವದೊಂದು ವ್ಯಸನವು ಇಂಥ ವ್ಯಸನಕ್ಕೆ ಬಲಿಬಿದ್ದು ತಮ್ಮ ಶೀಲ ಕೆಡಿಸಿಕೊಳ್ಳಬಾರದು. ಮುಂತಾದ ವ್ಯಾಖ್ಯಾನವನ್ನು ನಾನು ಬಹಳ ಜನರ ಬಾಯಿಂದ ಕೇಳಿದ್ದೇನೆ. ನನ್ನ ಮತವಾದರೂ ಹಾಗೆ ಇದ್ದುದರಿಂದ ಈ ಉಪದೇಶಾಮೃತದಿಂದ ನನಗೆ ಸಿಟ್ಟು ಬರಲಿಲ್ಲ. ಆದರೆ ನನ್ನ ಕಾರ್ಯ ಬಾಹುಲ್ಯದ ಮೂಲಕ ನಾನು ನಾಲ್ಕು ಜನರಲ್ಲಿ ಅಡ್ಡಾಡಹತ್ತಿದ ಮೇಲೆ, ಸಾವಕಾಶವಾಗಿ ನನ್ನ ಭ್ರಮವು ದೂರಾಗಹತ್ತಿತು ಮತ್ತು ಬೀಡಿ ಸೇದುವದರಿಂದ ಅನೇಕ ಲಾಭಗಳು ನನಗೆ ಕ್ರಮವಾಗಿ ತಿಳಿಯಹತ್ತಿದವು. ಇಷ್ಟೇ ಅಲ್ಲ ಬೀಡಿ ಸೇದುವಂಥ ಸಣ್ಣ ಪುಟ್ಟ ವ್ಯಸನಗಳನ್ನು ಸಮಾಜದಲ್ಲಿ ರೂಢಿ ಮಾಡಿದ ಮಹಾತ್ಮರು ಒಂದು ಬಗೆಯ ಸಂಸ್ಕೃತಿಯನ್ನೇ ನಿರ್ಮಿಸಿದರೆಂದು ನನ್ನ ತಿಳಿವಳಿಕೆಯಾಯಿತು.

ಸಣ್ಣ ವಯಸ್ಸಿನಲ್ಲಿಯೇ ಮನುಷ್ಯನ ಶೀಲ ಸ್ವಭಾವಗಳ ವಿಕಾಸವಾಗುತ್ತಿವೆ. ಅಂಥ ವಯಸ್ಸಿನಲ್ಲಿ ಆತನಿಗೆ ಪರೋಪಕಾರ ಮಾಡಲಿಕ್ಕೆ ಅವಕಾಶ ಕೊಟ್ಟು ಅದರ ಅಭ್ಯಾಸವನ್ನು ಕಲಿಸಬೇಕಾಗುತ್ತದೆ. ತಮ್ಮ ಕಡೆಗೆ ಇದ್ದ ಒಂದು ಲವಂಗೀ ಬೀಡಿಯನ್ನು ತಮ್ಮ ನೆರೆಯವರಿಗೆ ಕೊಡುವದು ಅಥವಾ ಒಂದು ನಿಮಿಷ ಮಾತ್ರವೇಕಾಗಲೊಲ್ಲದು ತಮ್ಮ ಜಿಂಕಿ ಪೆಟ್ಟಿಗೆಯನ್ನು ಆತನ ಉಪಯೋಗಕ್ಕಾಗಿ ಕೊಡುವದು, ಇಲ್ಲವೇ ತಮ್ಮ ಬೀಡಿಯನ್ನು ಹೊತ್ತಿಸುವ ಸಲುವಾಗಿ ಕೊರೆದ ಕಡ್ಡಿಯನ್ನು ಆರಿಸುವ ಮೊದಲು ನೆರೆಯವನ ಬಾಯಿಯಲ್ಲಿಯ ಬೀಡಿಯ ಮುಂದೆ ಹಿಡಿಯುವದು, ಮುಂತಾದ ಕೃತಿಗಳು ಸಣ್ಣವಾಗಿಯೇ ಕಾಣಿಸುವವು. ಆದರೆ ಸ್ವಲ್ಪ ವಿಚಾರ ಮಾಡಿದರೆ ಮನುಷ್ಯನ ಪರೋಪಕಾರ ವೃತ್ತಿಯ ವಿಕಾಸವಾಗಲಿಕ್ಕೆ ಇವುಗಳ ಉಪಯೋಗವು ಹೆಚ್ಚಾಗಿ ಇದ್ದುದ ಕಂಡು ಬರುವದು.

ದೇಶಾಟನ ಮಾಡಿದ್ದರಿಂದ ಆಗುವ ಲಾಭಗಳನ್ನು ಕವಿಯು ಕೆಳಗಿನಂತೆ ತೋರಿಸಿರುವನು " ದೇಶಸಂಚಾರಗಳಿಂದ ಪಂಡಿತರ ಸಂದರ್ಶನ, ಅಲ್ಲಲ್ಲಿ

ಹೊಸ ಹೊಸ ವಿಷಯಗಳ ಪರಿಚಯವಾಗಿ ಮನುಷ್ಯನು ಬುದ್ಧಿವಂತನಾಗಿ, ಜ್ಞಾನವೃದ್ಧಿಯಾಗುವದು. ”

ಕವಿಯ ಈ ಹೇಳಿಕೆಯನ್ನು ನಾವಾದರೂ ಒಪ್ಪುತ್ತೇವೆ. ಆದರೆ ಮೋಟಾರಿನಲ್ಲಿ ಅಥವಾ ಉಗಿಬಂಡಿಯಲ್ಲಿ ಪ್ರವಾಸ ಮಾಡುವಾಗ್ಗೆ ಸುಮ್ಮನೆ ಖಿಡಕಿಯಲ್ಲಿ ಮೋರೆ ಹಾಕಿ ಬೈಲು ಭೂಮಿಯ ಕಡೆಗೆ ಅಥವಾ ಮುಗಿಲ ಕಡೆಗೆ ಶೂನ್ಯ ದೃಷ್ಟಿಯಿಂದ ನೋಡುತ್ತ ಕುಳಿತ ಗೃಹಸ್ಥರಿಗೆ ಕವಿಯ ಮೇಲೆ ವರ್ಣಿಸಿದ ಪ್ರವಾಸದ ಲಾಭಗಳು ದೊರಕುವದೆಂತು ? ಅಂಥವರಿಗೆ ಜನರ ಪರಿಚಯವಾದರೂ ಹೇಗಾಗಬೇಕು ? ಪರಿಚಯ ಮಾಡಿ ಕೊಳ್ಳಬೇಕೆಂಬ ಇದಿರಿನಲ್ಲಿ ಕುಳಿತ ಗೃಹಸ್ಥನಿಗೆ ‘ ತಾವು ಯಾರು ? ಎಲ್ಲಿ ಹೊರಟಿರಿ ? ಎಲ್ಲಿಯವರು ? ಯಾಕೆ ಹೊರಟಿರಿ ? ಮುಂತಾದ ಪ್ರಶ್ನೆಗಳನ್ನು ಸುರಿಸಿದರೆ ಆತನ ಪರಿಚಯವಾಗುವ ಬದಲು ಇಲ್ಲದ ಉಸಾಬರಿ ಮಾಡಿದ ಬಗ್ಗೆ ಮೊಸಡಿಯ ಪೂಜೆಯಾಗುವ ಸಂಭವವು ಹೆಚ್ಚು. ಇಂಥ ಗೊಡವೆಗೆ ಹೋಗದೆ, ಕಿಸೆಯೊಳಗಿಂದ ಎರಡು ಬೀಡಿ ತೆಗೆದು ಒಂದನ್ನು ತಮ್ಮ ಬಾಯಲ್ಲಿ ಇಟ್ಟುಕೊಳ್ಳಬೇಕು, ಮತ್ತೊಂದನ್ನು ಆತನಿಗೆ ಕೊಡಬೇಕು. ಅದನ್ನು ಆತನು ಮುಗುಳು ನಗೆಯಿಂದ ಸ್ವೀಕರಿಸಿದರೆ ನಮ್ಮ ಕೆಲಸ ಸಾಧಿಸಿತೆಂದು ತಿಳಕೊಳ್ಳ ಬೇಕು. ಬೀಡಿ ತಕ್ಕೊಳ್ಳದಿದ್ದರೆ ಕನಿಷ್ಟ ಪಕ್ಷಕ್ಕೆ ಆ ಗೃಹಸ್ಥನು ಆಭಾರ ಪ್ರದರ್ಶನವನ್ನಾದರೂ ಮಾಡುವನು. ಅದನ್ನೂ ಮಾಡದಿದ್ದರೆ ಕಡೆಗೆ ಇರುಕಳ ಎಮ್ಮೆಯಂತೆ ವ್ಯವೋಲಾದರೂ ಬರಲಿಕ್ಕಿಲ್ಲ. ಇಂಥ ಪ್ರಸಂಗದಲ್ಲಿ ಆತನ ಬಣ್ಣ ತಿಳಿದು ಹರಟೆ ಪ್ರಾರಂಭಿಸಲು ಅಡ್ಡಿ ಇಲ್ಲ. ಈ ರೀತಿಯಿಂದ ವಿದ್ವಾನ್ ಮಣಿಗಳ ಕೂಡ ಸಂಭಾಷಣೆಯಾಗಿ ಮನುಷ್ಯನಿಗೆ ಜ್ಞಾನ ಪ್ರಾಪ್ತಿ ಯಾಗುತ್ತದೆ.

ಇತ್ತೀಚೆಗೆ ಸಮಾಜ ರಚನೆಯ ಬಗ್ಗೆ ಜನರ ವಿಚಾರಗಳಲ್ಲಿ ಬಹಳ ವೇಗದಿಂದ ಬದಲಾವಣೆಯಾಗಹತ್ತಿದೆ. ಸಮಾಜದಲ್ಲಿ ಉಚ್ಚ, ನೀಚ ಭಾವ ಗಳ ನಾಮಶೇಷವಾಗಬೇಕು. ಇಷ್ಟೇ ಅಲ್ಲ ವೃದ್ಧರು, ತರುಣರು, ಗಂಡಸರು ಹೆಂಗಸರು ಬಡವರು, ಶ್ರೀಮಂತರು ಎಂಬ ಭೇದ ಭಾವಗಳು ಸಹ ಜನರಿಗೆ ಗ್ರಾಮ್ಯವೆನಿಸಹತ್ತಿವೆ. ಈ ಆಧುನಿಕ ವಿಶ್ವದಲ್ಲಿ ಮೇಲೆ ಹೇಳಿದ ಭೇದ ಭಾವಗಳನ್ನು ನಷ್ಟ ಮಾಡಲಿಕ್ಕೆ ಬೀಡಿ, ಬೆಂಕಿಪೆಟ್ಟಿಗೆಯ ಸಂಗಸುವಂಥ ಬೇರೆ

ರಾಮಬಾಣ ಉಪಾಯವು ಎಲ್ಲಿಯೂ ಸಿಗಲಾರದು. ಕೇವಲ ಅಮೃತಪಾನ ಮಾಡಿ ಉದರ ನಿರ್ವಾಹಮಾಡುವ ಇಂದ್ರಲೋಕದಲ್ಲಿಯ ದೇವತೆಗಳಲ್ಲಿಯೂ ಸಹ ಭೇದ ಭಾವಗಳಿರಬಹುದು. ಆದರೆ ಬೀಡಿ ಸೇದುವ ಆ ಮಾನವರಲ್ಲಿ ಆ ಭೇದ ಭಾವವು ಕಾಣಲಿಕ್ಕಿಲ್ಲ. ಯಾರು ಬೇಕಾದವರು ಬೇಕಾದವರ ಕಡೆ ಯಿಂದ ಬೀಡಿ ತಕ್ಕೊಳ್ಳಬಹುದು. ಮತ್ತು ಬೇಕಾದವರಿಗೆ ಕೊಡಬಹುದು. ಬೀಡಿ ಸೇದಲಿಕ್ಕೆ ಅಥವಾ ಹೊಗೆ ಬಿಡಲಿಕ್ಕೆ ಯಾವ ಸ್ಥಳದಲ್ಲಿಯೂ ಅಥವಾ ವೇಳೆಯಲ್ಲಿಯೂ ಅಡ್ಡಿ ಇಲ್ಲ. ಒಂದು ವೇಳೆ ಹಾಗಿದ್ದರೆ ಇರಬಹುದು. ಕೆಲವು ತರುಣರು ಬೀಡಿ ಬೆಂಕಿಪೆಟ್ಟಿಗೆಗಳ ಗೆಳೆತನವನ್ನು ಹೊಸದಾಗಿ ಮಾಡಿಕೊಳ್ಳು ವಾಗ ಹಿರಿಯರಿಗೆ ಹೆದರುವರು. ಸಾಧಾರಣವಾಗಿ ಅವರು ಅನಾರೋಗ್ಯಕರ ವಾದ ಸ್ಥಳದಲ್ಲಿ ಬೀಡಿ ಬೆಂಕಿಪೆಟ್ಟಿಗೆಗಳ ಪ್ರಥಮಭೆಟ್ಟಿಯನ್ನು ತಕ್ಕೊಳ್ಳುತ್ತಾರೆ. ಆದರೆ ಅಂಥ ಹಿರಿಯರಿಗೆ ಅಥವಾ ಅವರಿಗೆ ಅಂಜುವ ತರುಣರಿಗೆ ಒಂದು ವೇಳೆ ಈ ಹೊಸ ಸಂಸ್ಕೃತಿಯ ಮಹತ್ವವು ತಿಳಿಯಿತೆಂದರೆ ಈ ಭೇದ ಭಾವವೂ ಅಥವಾ ಈ ಭೀತಿಯು ತನ್ನಷ್ಟಕ್ಕೆ ತಾನೇ ಕಮರಿ ಹೋಗುವದು.

'ಜ್ಞಾನಭಾಂಡಾರ'ವೆಂದು ವಿಚಾರ ಮಾಡಲಾಗಿ ಒಂದೇ ಒಂದು ಬೀಡಿಯಲ್ಲಿ ಜ್ಞಾನವು ತುಂಬಿಕೊಂಡಿದುದು ಕಂಡುಬರುವದು ಮಧ್ಯಪ್ರಾಂತ ದಲ್ಲಿರುವ ಗೊಂಡಿಯಾದ ಹತ್ತಿರದಲ್ಲಿರುವ ಅರಣ್ಯದಿಂದ ಬೀಡಿಎಲೆ ಗಳನ್ನು ಬೆಳಗಾವಿ ಜಿಲ್ಲೆಯಲ್ಲಿ ನಿಪ್ಪಾಣಿ ಭಾಗದೊಳಗಿನ ತಂಬಾಕನ್ನೂ ಕೂಡಿಸಿ ಪುಣೆಯಲ್ಲಿ ಓಣಿ, ಓಣಿಗಳಲ್ಲಿ ವಾಸಿಸುವ ಸ್ತ್ರೀ ಪುರುಷರ ಕಡೆಯಿಂದ ಸಣ್ಣ ದೊಡ್ಡ ಬೀಡಿಗಳನ್ನು ಕಟ್ಟಿಸಿ ಅವುಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟು, ಅವುಗಳನ್ನು ದೊಡ್ಡ ದೊಡ್ಡ ಶಹರ ಪಟ್ಟಣಗಳಲ್ಲಿ ಮಾರಲು ಬೇಕಾಗುವ ಶಾರೀರಕ ಶ್ರಮವು ದುಡ್ಡು, ಸಂಘಟನೆ ಮುಂತಾದವುಗಳನ್ನು ವಿಚಾರ ಮಾಡಿ ನೋಡಿದರೆ, ನಾವು ಚಿಕ್ಕಂದಿನಲ್ಲಿ ಓದಿದ ವಿಸ್ಮಯಕಾರಕ ಕಡಬಿನ ಕಥೆಯ 'Wonderful Pudding' ದ ನೆನಪಾಗುತ್ತದೆ.

ಇಷ್ಟರ ಮೇಲೆಯೇ ಬೀಡಿಯ ಮಹತ್ವವು ತೀರುವಂತಿಲ್ಲ. ಆರ್ಥಿಕ, ವ್ಯಾವಹಾರಿಕ, ಮತ್ತು ಮುಖ್ಯವಾಗಿ ಸಾಂಸ್ಕೃತಿಕ ದೃಷ್ಟಿಯಿಂದಾಗುವ ಬೀಡಿಯ ಲಾಭವನ್ನು ನಾವು ಹೇಳಿದೆವು. ಇನ್ನು ಕಲೆಯ ದೃಷ್ಟಿಯಿಂದ ಸಹ ನಾವು ಬೀಡಿಯ ವಿಚಾರ ಮಾಡಬಹುದು.

ಕಿಸೆಯೊಳಗಿಂದ ಬೀಡಿಯನ್ನು ತೆಗೆದು ಬಾಯಲ್ಲಿಟ್ಟುಕೊಳ್ಳುವದು ಒಂದು ಸಣ್ಣ ಕೆಲಸವಾದರೂ, ಬೀಡಿಯನ್ನು ತುಟಿಯಲ್ಲಿ ಹೇಗಿಟ್ಟುಕೊಳ್ಳಬೇಕು, ಎಡಗಡೆ ಮೂಲೆಯಲ್ಲಿಟ್ಟುಕೊಳ್ಳಬೇಕೋ ? ಬಲಗಡೆಯ ಮೂಲೆಯಲ್ಲಿಟ್ಟುಕೊಳ್ಳಬೇಕೊ, ಬಾಯಲ್ಲಿ ಬೀಡಿಯನ್ನಿಟ್ಟುಕೊಂಡು ಮಾತಾಡಲಿಕ್ಕೆ ಬರುವಷ್ಟು ಹಗುರಾಗಿ ಹಿಡಿಯಬೇಕೊ, ಅಥವಾ ಗಟ್ಟಿಯಾಗಿ ಹಿಡಿಯಬೇಕೊ, ಇತ್ಯಾದಿ ವಿಷಯಗಳಲ್ಲಿ ಕೌಶಲ್ಯವು ಉಂಟು. ಕಲೆಯೂ ಉಂಟು. ಬಾಯಿಯಲ್ಲಿ ಬೀಡಿ ಹಿಡಿಯುವ ರೀತಿಯ ಮೇಲಿಂದ ಆ ಮನುಷ್ಯನ ಭಾವ ಪರೀಕ್ಷೆಯನ್ನಾದರೂ ಒಮ್ಮೊಮ್ಮೆ ಮಾಡಲಿಕ್ಕೆ ಬರುವದು. ಅದೇ ಪ್ರಕಾರ ಹೊಗೆಬಿಡುವದಾದರೂ ಕೂಡ ಒಂದು ವಿಷಯವಾಗಿದೆ. ಒಮ್ಮೆಲೇ ಹೊಗೆಯ ತುತ್ತನ್ನು ಹೊರಗೆ ಬಿಟ್ಟು ಎಲ್ಲರ ತಲೆಯ ಮೇಲೆ ಹೊಗೆಯ ಮೋಡನ್ನು ಕವಿಸುವದು. ಅಥವಾ ನಿಲ್ದಾಣದಿಂದ ಹೊರಡುವ ತಯಾರಿಯಲ್ಲಿದ್ದ ಉಗೆ ಬಂಡಿಯ ಇಂಜನ್‌ದಂತೆ ಭುಸ್, ಭುಸ್, ಭುಸ್, ಹೀಗೆ ಸ್ವರ ತೆಗೆಯುತ್ತ ಸ್ವಲ್ಪ ಸ್ವಲ್ಪೇ ಹೊಗೆ ಬಿಡುವದು, ಅಥವಾ ಬಾಯಲ್ಲಿ ಸ್ವಲ್ಪ ಸ್ವಲ್ಪೇ ಹೊಗೆ ತಕ್ಕೊಂಡು ಅದನ್ನೇ ಕಲ್ಲು ಸಕ್ಕರೆಯ ಹರಳಿನಂತೆ ಬಹಳ ಹೊತ್ತಿನವರೆಗೆ ಇಟ್ಟುಕೊಳ್ಳುವದು. ಇವೆಲ್ಲ ಕಲಾಕೃತಿಗಳು. ಮತ್ತು ಇದರಿಂದ ಬೀಡಿ ಭಕ್ತರು ಹೇಗೆ ಬರಬರುತ್ತ ಕಲೋಪಾಸಕರಾಗುತ್ತಾರೆಂಬುದನ್ನು ನಮ್ಮ ನಿದರ್ಶನಕ್ಕೆ ತಂದು ಕೊಡುತ್ತವೆ.

ಬೀಡಿ ಸೇದುವ ಅಭ್ಯಾಸವಿತ್ತೆಂದರೆ ಒಮ್ಮೊಮ್ಮೆ ಬೀಡಿ ಚುಂಬನ ಉದ್ಭವಿಸುತ್ತದೆ. ನಮ್ಮ ಮುಂದೆ ಒಬ್ಬ ಗೃಹಸ್ಥನು ಬೀಡಿ ಸೇದುತ್ತ ಕುಳಿತಿರುವನೆಂದು ಕಲ್ಪಿಸುವಾ. ಅವನನ್ನು ನೋಡಿ ನಮಗೂ ಕೂಡ ಬೀಡಿ ಸೇದುವ ನೆನಪಾಗುತ್ತದೆ ಕೂಡಲೆ ಕಿಸೆಯೊಳಗಿಂದ ಒಂದು ಬೀಡಿ ತೆಗೆಯುವೆವು. ಆದರೆ ದುರ್ದೈವದಿಂದ ನಮ್ಮಲ್ಲಿ ಕಡ್ಡಿ ಇರಬಾರದು. ಅಥವಾ ನಮಗೆ ತಿಳಿಯದೆ ನಮ್ಮ ಪೆಟ್ಟಿಗೆಯು ಖಾಲಿಯಾಗಿರಬೇಕು. ಇಂಥ ದುರ್ಧರ ಪ್ರಸಂಗದಲ್ಲಿ ನಾವು ನಮ್ಮ ಸುತ್ತಮುತ್ತು ನೋಡಹತ್ತುವೆವು. ನಮ್ಮ ಹಾನ ಭಾವಗಳನ್ನು, ನೋಡಿ ನಮಗೊದಗಿದ ಸಂಕಟ ಪ್ರಸಂಗವನ್ನು ಇದಿರಿನಲ್ಲಿ ಕುಳಿತ ಭಕ್ತನು ಕೂಡಲೇ ಕಂಡುಹಿಡಿಯುವನು. ನಿತ್ಯದ ಪರೋಪಕಾರ ವೃತ್ತಿಗನುಸಾರವಾಗಿ ಆ ಗೃಹಸ್ಥನು ತನ್ನ ಜೆಂಕಿ ಪೆಟ್ಟಿಗೆಯನ್ನು ನಮಗೆ ಕೊಡ

ಬೇಕೆಂದು ಹುಡುಕಹತ್ತುವನು. ಅದು ಅವನಿಗೆ ಸಿಗುವದಿಲ್ಲ. ಸಿಕ್ಕರೂ ಅದರಲ್ಲಿ ಕಡ್ಡಿಗಳಿಲ್ಲವೆಂದು ತಿಳಿಯೋಣ, ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ನಮ್ಮನ್ನು ಎಳ್ಳಷ್ಟೂ ಎದೆಗುಂದಿಸದೆ ಯಾರ ಬಾಯಲ್ಲಿ ಹೊತ್ತಿದ ಬೀಡಿ ಇರುವದೋ, ಆ ಗೃಹಸ್ಥನು ಪ್ರೇಮದಿಂದ ಬಾಗಿ ಮೋರೆ ಮುಂದಕ್ಕೆ ಮಾಡುವನು. ಆ ವೇಳೆಗೆ ನಾವಾದರೂ ನಮ್ಮ ಬಾಯಲ್ಲಿ ಹೊತ್ತದೆ ಇದ್ದ ಬೀಡಿಯನ್ನಿಟ್ಟು ಕೊಂಡು ಅಂತ್ಯಂತ ಆದರದಿಂದ ಬಾಗುವೆವು. ಈ ಕ್ರಿಯೆಯಲ್ಲಿ ಎರಡು ಬೀಡಿಗಳ ತಲೆಗಳು ಒಂದಾಗುವವು, ಮತ್ತು ಇಬ್ಬರೂ ಒಂದೇ ವೇಳೆಯಲ್ಲಿ ಶ್ವಾಸ ಜಗ್ಗಿದರೆ ಐವಾರು ನೆಕಂದುಗಳಲ್ಲಿ ನಿರ್ಜೀವವಾದ ಬೀಡಿಯು ಸಜೀವವಾಗುವದು, ಮುಂದೆ ಎರಡೂ ಬಾಯಿಯೊಳಗಿಂದ ಹೊಗೆಯು ಹಾಯಹತ್ತುವದು. ಈ ರೀತಿ ಬೀಡಿ ಹೊತ್ತಿಸುವದಕ್ಕೆ ನಾವು ಬೀಡಿ ಚುಂಬನವೆಂದು ಕರೆಯುವೆವು. ಇದರಲ್ಲೇನು ತಪ್ಪು.

ಇನ್ನು ಬೇಕಾದಂಥ ಚಲೋ ಪದಾರ್ಥಕ್ಕೂ ಹೆಸರಿಡುವ ಸರ್ವಜ್ಞರು ಜಗತ್ತಿನಲ್ಲಿ ಉಂಟು. ಇಂಥ ಜನರು ಬೀಡಿ ಸೇದುವದರ ಕಡೆಗೆ ವಕ್ರದೃಷ್ಟಿಯನ್ನು ಬೀರುವರು. ಅವರು ಯಾವಾಗಲೂ ಮಾಡುವ ತಕರಾರೆಂದರೆ ಬೀಡಿ ಸೇದುವವನು ಬೇಕಾದಾಗ ಬೇಕಾದಲ್ಲಿ ಕೆಮ್ಮುವನು, ಉಗುಳುವನು, ಹೊಗೆ ಬಿಡುವನು, ಮತ್ತು ತನ್ನ ಈ ಸೊಗಡುತನದಿಂದ ಎರಡನೇಯವರಿಗೆ ತೊಂದರೆ ಆಗಬಹುದೆಂಬ ಕಲ್ಪನೆಯು ಕೂಡಾ ಅವನಿಗೆ ಇರುವದಿಲ್ಲ. ಇಷ್ಟು ಸಂಸ್ಕೃತಿ ಹೀನನಾಗುತ್ತಾನೆ. ಬೀಡಿ ಸೇದುವ ಭಕ್ತರು ಅಲ್ಲಲ್ಲಿ ಬೂದಿ ಚಟಿಕೆ ಹೊಡೆಯುತ್ತ, ಬೇಕಾದಲ್ಲಿ ಬೀಡಿ ಕಡ್ಡಿಗಳನ್ನು ಒಗೆಯುತ್ತ, ಮತ್ತು ಬಾಯೊಳಗಿನ ಹೊಗೆಯಿಂದ ಸುತ್ತಮುತ್ತಲಿನ ಹವೆಯನ್ನು ಕೆಡಿಸುತ್ತ, ಜನರ ಸೋವಿ, ಗೈರಸೋವಿಗಳನ್ನು ಲಕ್ಷಕ್ಕೆ ತಾರದೆ ಜಗತ್ತಿನಲ್ಲಿ ಅಲೆಯುತ್ತಾರೆ. ಇದು ಅವರ ಮೇಲೆ ಹೊರಿಸುವ ಮತ್ತೊಂದು ಆರೋಪ. ಆದರೆ ನಾವು ಮೇಲೆ ಹೇಳಿದಂತೆ ಈ ಕಲಿಯುಗದಲ್ಲಿಯೂ ಕೂಡ ದೇವರಿಗೆ ಹೆಸರಿಡುವವರಿದ್ದಾರೆ. ಅಂದ ಮೇಲೆ ಬೀಡಿ, ಸೇದುವವರ ಮೇಲೆ ಪುಷ್ಪಗಳು ಏರಿದರೆ ಇದರಲ್ಲಿ ಆಶ್ಚರ್ಯವೇನು. ಒಂದು ವೇಳೆ ಬೆಂಕಿ ಕಡ್ಡಿಯು ಹತ್ತಿರವಿದ್ದರೆ ಅದರ ಉಪಯೋಗ ಮಾಡಿ ಪಂಚಪಕ್ವಾನ್ನಗಳ ಭೋಜನವನ್ನು ತಯಾರಿಸಬಹುದು ಅದರಂತೆ ಅದೇ ಕಡ್ಡಿಯಿಂದ ಮೃತದೇಹ ಸಂಸ್ಕಾರ

ಮಾಡಬಹುದು. ಅಥವಾ ಒಬ್ಬರ ಮನೆಗೆ ಹಚ್ಚಲಿಕ್ಕೊ ಬರುವದು, ಇಷ್ಟರ ಮೇಲಿಂದಲೇ ನಾವು ಪದಾರ್ಥ ಯಾವದೇ ಇದ್ದರೂ ಅದು ಉಪಯೋಗ ಮಾಡುವವನ ಮೇಲೆ, ಅದು ಚಲೋ ಅಥವಾ ಕೆಟ್ಟವೆಂಬುದು ಅವಲಂಬಿಸಿರುತ್ತದೆ. ಎಂದು ಉಪದೇಶ ಮಾಡಬಹುದು. ಇದರ ಮೇಲಿಂದ ಹಿಂದು ಮುಂದಿನ ವಿಚಾರ ಮಾಡದೆ, ಬೀಡಿ ಸಂಸ್ಕೃತಿಗೆ ಹೆಸರಿಡುವದು ಮೂರ್ಖತನದ್ದೆಂದು ತಿಳಿಯಬೇಕು.



# ಅಮೀನಗಡದ ಸಂತೆ.



ಅಮೀನಗಡದ ಸಂತೆ ದೊಡ್ಡದು. ಸುತ್ತಲಿನ ಇಪ್ಪತ್ತು ಹರದಾರಿ ಇಷ್ಟು ಹೊಡ್ಡ ದನಗಳ ಸಂತೆ ಕೂಡುವದಿಲ್ಲ. ಅದರಲ್ಲಿ ಈ ವರ್ಷ ಬರ ಬಿದ್ದು ದುರ್ಭಿಕ್ಷವಾದ್ದರಿಂದ ದನದ ಸಂತೆಗೆ ಮತ್ತಿಷ್ಟು ಕಳೆ ಏರಿತ್ತು. ಈ ಹೆಸರಾದ ಸಂತೆಯಲ್ಲಿ ಮತ್ತಾವ ವಸ್ತುಗಳನ್ನು ಕೊಳ್ಳುವ ಅಥವಾ ಮಾರುವ ವ್ಯವಹಾರವಾಗುವದಿಲ್ಲ. ಆದರೆ ಎಲ್ಲಿ ನೋಡಿದಲ್ಲಿ ದನಗಳು ಮಾತ್ರ ಕಾಣುವವು.

ಈ ವರ್ಷ ಕಂಸಾಲವೆಂದು ಮೊದಲೇ ಹೇಳಿದ್ದೇವೆ. ಆದ್ದರಿಂದ ಸಂತೆಯಲ್ಲಿ ಒಂದು ಹಿಂಡುವ ಎಮ್ಮೆ ಅಥವಾ ಆಕಳವನ್ನು ತಕ್ಕೊಂಡು ಅದರ ಹೈನವನ್ನು ಉಣ್ಣಬೇಕೆಂಬ ಅಭಿಲಾಷೆಯಿಂದ, ಎಮ್ಮೆ ಆಕಳನ್ನು ಹುಡುಕುವ ಸವಿಗಾರರು ಅಲ್ಲಿ ಕಂಗೊಳಿಸುವ ಬಗೆ ಹ್ಯಾಗೆ? ಮನೆಯಲ್ಲಿ ಬೇಕಾದಷ್ಟು ಹತ್ತೀಕಾಳುಂಟು. ಒಂದು ಸಣ್ಣ ಹೋರಿಗರವನ್ನು ವೈದು, ಮೆಯಿಸಬೇಕೆಂಬ ಲವಲವಿಕೆಯುಳ್ಳ ಒಬ್ಬ ಒಕ್ಕಲಿಗನು ಸಹ ಆ ಸಂತೆಯಲ್ಲಿ ಇದ್ದಿಲ್ಲ. ಇದೇ ವರ್ಷ ಹೆಗಲು ಹಚ್ಚಿದ ಬಿಳಿ ಹೊಸ ಹೋರಿಯ ಜೋಡಿಗೆ ಅದರಂಥ ಬಿಳೀ ಹೋರಿಯನ್ನೇ ಕೊಳ್ಳುವ ಉಬ್ಬು ಯಾರ ಮೋರೆಯ ಮೇಲೂ ಹೊಳೆಯುತ್ತಿದ್ದಿಲ್ಲ.

ನದೀ ಮಂಡೆಯ ಮಡಿಯಲ್ಲಿ ಕಟ್ಟಿ ಮೆಯಿಸಿದ್ದರಿಂದ ತನ್ನ ಮೆಚ್ಚಿನ ಆಕಳವು ಕೈಯಿಟ್ಟರೆ ಮಾಸುವದೆಂದು ಅದರ ಮೇಲೆ ಜೂಲು ಹಾಕಿ ಮಾರಾಟಕ್ಕೆ ತಂದ ಆಕಳ ಒಡೆಯನು ಆ ಸಂತೆಯಲ್ಲಿ ಇದ್ದಿಲ್ಲ. ಗೋದಿಯ ಹುಗ್ಗೀ ತಿನಿಸಿದ್ದರಿಂದ ತನ್ನ ಹೋರಿ ಕಸಿವಿನದು, ಬೇಕಾದರೆ ಕಲ್ಲೊಳಸಿ ನೋಡಿ ಪರೀಕ್ಷಿಸಿ ಹೋರಿಯನ್ನು ಕೊಳ್ಳಬೇಕೆಂದು ಅಭಿಮಾನದಿಂದ ಹೇಳುವ ಸೌಭಾಗ್ಯವು ಆ ಸಂತೆಯಲ್ಲಿ ಯಾರ ಪಾಲಿಗೂ ಬಂದಿದ್ದಿಲ್ಲ.

ಒಣ ಚಿಪ್ಪಾಡಿ ಮೆದ್ದು, ಅಸ್ಥಿಮಾತ್ರ ಅವಶೇಷವಾದ, ಉಣ್ಣಿ, ಚಿಕ್ಕಾಡು ಗಳಿಂದ ಮುತ್ತಿದ, ಮತ್ತು ಕಣ್ಣಲ್ಲಿ ಜೀವ ಹಿಡಿದ ಸಣ್ಣ ದೊಡ್ಡ ದನಗಳನ್ನು ಹರಕ ಹಗ್ಗಗಳಿಂದ ಕಟ್ಟಿಕೊಂಡು ಬಂದು, ಒಕ್ಕಲಿಗರು ಸಂತಿಯಲ್ಲಿ ಕೆಳಗೆ ಮೋರೆ ಮಾಡಿ ಕುಳಿತಿದ್ದರು. ಅಂಥ ಸಂತೆಯಲ್ಲಿ ಸಹ ಗಿರಾಕಿಗಳಿಗೆ ಕಡಿಮೆ ಯಿದ್ದಿಲ್ಲ. ಆದರೆ ಆ ಗಿರಾಕಿಗಳು ಮಾತಾಡಿಸಿದ ಕೂಡಲೆ ದನಗಳನ್ನು ತಂದ ಒಕ್ಕಲಿಗರು ನಿದ್ದೆಯಿಂದ ಎದ್ದು ಗಾಬರಿಯಾಗಿ ನೋಡುವಂತೆ ಗಿರಾಕಿ ಗಳನ್ನು ನೋಡುತ್ತಿದ್ದರು. ಯಾಕಂದರೆ ಗಿರಾಕಿಗಳು ಬಹುತರವಾಗಿ ಕಟುಕ ರಿದ್ದರು ಒಂದು ಕಾಲಕ್ಕೆ ಹೊಟ್ಟೆಯ ಮಕ್ಕಳಿಗಿಂತ ಹೆಚ್ಚಿನ ಪ್ರೀತಿಯಿಂದ ಬೆಳೆಸಿದ ದನಗಳನ್ನು ಈಗ ಅವುಗಳ ಮರುಕ ನೋಡಲಾರದೆ ತಮ್ಮ ಹೊಟ್ಟೆಯ ಸಲುವಾಗಿ ಕಟಕರಿಗೆ ಮಾರುವ ಪ್ರಸಂಗ ಒದಗಿದ್ದರಿಂದ ಒಕ್ಕಲಿ ಗರ ಹೃದಯದಲ್ಲಿ ಬೆಂಕಿ ಬಿದ್ದಿತ್ತು. ಕೂತಲ್ಲಿಯೇ ಭೂಮಿ ಒಡೆದು ತಮ್ಮನ್ನು ನುಂಗಿದರೆ ಒಳಿತಾಗುವದೆಂದು ಸಹ ಒಮ್ಮೊಮ್ಮೆ ಅವರಿಗೆ ಅನಿಸುತ್ತಿತ್ತು. ಗಿರಾಕಿ ಹತ್ತರ ಬಂದ ಕೂಡಲೆ ಅವರ ಕೂಡ ಮಾತಾಡುವದೂ ಬೇಡ ಬೆಲೆಯಗೋಸ್ಕರ ವಾದಿಸುವದೂ ಬೇಡ, ಕೈಯಲ್ಲಿಯ ದನಗಳನ್ನು ಬಿಟ್ಟು ದೂರ ಓಡಿಹೋಗಬೇಕೆಂಬ ಬುದ್ಧಿ ಸಹ ಕೆಲವರಿಗೆ ಆಗುತ್ತಿರಬಹುದು. ಆದರೆ ಮಾಡುವದೇನು ? 'ಕಣ್ಣುಮರೆ ಮಣ್ಣುಮರೆ' ಎಂಬ ಗಾದೆಯಂತೆ ಒಮ್ಮೆ ದನಗಳನ್ನು ಕಣ್ಣುಮರೆ ಮಾಡಿದರೆ ಸಾಕು ಇಷ್ಟೇ ಎಲ್ಲರ ವಿಚಾರ. ಇರಲಿ.

ವ್ಯಾಪಾರಕ್ಕೆ ಪ್ರಾರಂಭವಾಯಿತು. ಐದು ಸೂಲ ಸೊಗಸಾದ ಹೈನ ಮಾಡಿದ ಎಮ್ಮೆಯನ್ನು ಕೇವಲ ಅದರ ತೊಗಲಿನ ಬೆಲೆಗೆ ೫ ರೂಪಾಯಿಗ ಳಿಗೆ ಕಟಕನಿಗೆ ಕೊಟ್ಟು, ಅದನ್ನು ಆತನು ಎಳಕೊಂಡು ಹೋಗುವಾಗ್ಗೆ ಅತ್ತೆಯ ಮನೆಗೆ ಹೋಗುವ ಮಗಳ ಕಡೆಗೆ ನೋಡುವಂತೆ ಅದನ್ನು ನೋಡುತ್ತ ಒಬ್ಬ ಒಕ್ಕಲಿಗನು ಒಂದೆಡೆಯಲ್ಲಿ ಕೂತಿದ್ದನು. ಪ್ರತಿ ಸಲ ಹೋರಿಯನ್ನೇ ಈದು ಒಂದು ಕಾಲಕ್ಕೆ ತನ್ನಮೇಲೆ ಬಂಗಾರದ ಮಳೆಗರೆದ ದೊಡ್ಡಗೋಮಾತೆಯನ್ನು ಕಟಕರ ಕೈಗೆ ಕೊಟ್ಟು, ತನ್ನ ತಾಯಿ ಸತ್ತಂತೆ ಮನದಲ್ಲಿಯೇ ಕೊರಗುವ ದೈವಗೇಡಿಯು ಮತ್ತೊಂದೆಡೆಯಲ್ಲಿದ್ದನು. ಮಳೆಗಾಳಿಗಳಲ್ಲಿ ಅಥವಾ ಛಳಿ ಬಿಸಲುಗಳಲ್ಲಿ ಯಾವಾಗಲೂ ಮೈಮುರಿ ದುಡಿದು ತನ್ನ ಸಂಸಾರದಲ್ಲಿ ಒಡಹು ಟ್ಟಿದ ತಮ್ಮನಂತೆ ಸಹಾಯ ಮಾಡಿದ, ಎತ್ತುಮಾರಿದ ಮತ್ತೊಬ್ಬನು ಭ್ರಾತೃವಿ

ಯೋಗದ ದುಃಖವನ್ನು ಅನುಭವಿಸುತ್ತಿದ್ದನು. ಆಯಿತು ಸಂತೆ ಮುಗಿಯಿತು. ತಮ್ಮ ತಮ್ಮ ಪಾವಡದಲ್ಲಿ ರೂಪಾಯಿಗಳನ್ನು ಕಟ್ಟಿಕೊಂಡು ಒಕ್ಕಲಿಗರು ತಮ್ಮ ತಮ್ಮ ಹಳ್ಳಿಗಳಿಗೆ ಹೊರಟರು. ಈ ಹಣದಿಂದ ಅವರ ಕಣ್ಣು ಗಳು ಆನಂದಾಶ್ರುಗಳಿಂದ ತುಂಬದೆ ದುಃಖಾಶ್ರುಗಳಿಂದ ತುಂಬಿದ್ದವು. ರೂಪಾಯಿಗಳ ಗಂಟು ಕೆಂಡದಂತೆ ಅವರ ತಲೆಯನ್ನು ಸುಡುತ್ತಿತ್ತು. ಮನೆಗೆ ಹೋಗಲಿಕ್ಕೆ ಅವರ ಹೆಜ್ಜೆಗಳು ಕಿತ್ತಲೊಲ್ಲವು. ಮನೆಗೆ ಹೋದ ಕೂಡಲೆ 'ಹಂಬಾ' ಎಂದು ಮೇವು ಹಾಕಲಿಕ್ಕೆ ಕರೆಯುವ ಆಕಳವು ಇಂದು ಮನೆ ಯಲ್ಲಿ ಇಲ್ಲ. ಈ ವಿಚಾರದಿಂದ ಅವರ ಹೃದಯವು ಕರಗಿ ನೀರು ನೀರು ಆಗಿತ್ತು. ಯಾರಾದರೂ ಪ್ರಿಯರಾದಂಥವರ ಅಂತ್ಯ ವಿಧಿ ಮುಗಿಸಿ ಸ್ಮಶಾನ ದಿಂದ ಮನೆಗೆ ತಿರುಗಿ ಹೋಗುವಂತೆ ಒಕ್ಕಲಿಗರು ತಮ್ಮ ತಮ್ಮ ಮನೆಗೆ ಹೋದರು. ಅವರ ಸಂತೆ ಮುಗಿಯಿತು.

ಸಂತೆಯಲ್ಲಿ ಕೊಂಡ ದನಗಳನ್ನು ಹೊಡಕೊಂಡು ಕಟಕರು ಹೊರಟಿ ದ್ದರು. ಸಂತೆಯಲ್ಲಿ ಕೊಂಡಕೂಡಲೆ ಅವುಗಳಿಗೆ ಮೇವು ಹಾಕುವ ನೆನಪು ಅಥವಾ ಸಮಯ ಕಟಕರಿಗೆ ಸಿಗದ್ದರಿಂದ ಸಂಜೆಯ ವರೆಗೆ ದನಗಳು ಉಪ ವಾಸ ಇದ್ದವು. ಈ ಮಾದರಿಯ ಉಪವಾಸವು ಅವುಗಳಿಗೆ ಹೊಸದಲ್ಲ. ಆದರೆ ಮನೆಯಲ್ಲಿ ಉಪವಾಸ ಕಟ್ಟಿದರೂ ಮೇಲಿಂದಮೇಲೆ ಹತ್ತರ ಬಂದು ಮೈಮೇಲೆ ಕೈಯಾಡಿಸುವ ಮರುಕಿನ ಒಡೆಯನಿದ್ದನು. ಕಟಕರ ಕೈಸೇರಿದ ಮೇಲೆ ಕೇಳುವವರಾರು? ಮೈದಡವಿ ಮಾತಾಡಿಸುವದಂತೂ ಕನಸಿನಲ್ಲಿಯೇ. (ದೂರೇ ಉಳಿಯಿತು).

ಏನೂ ಪ್ರಯಾಸ ತಟ್ಟದೆ ಹಿಂಡುದನಗಳನ್ನು ಹೊಡಕೊಂಡು ಹೋಗುವ ಸುಲಭ ಉಪಾಯವು ಕಟಕರಿಗೆ ಗೊತ್ತಿದೆ. ಒಂದೊಂದು ಹಗ್ಗದಿಂದ ನಾಲ್ಕೈದು ಸಣ್ಣದೊಡ್ಡ ದನಗಳನ್ನು ತೊಡಕಿಸಿ ಕಟ್ಟುವ ಯುಕ್ತಿಯಿಂದ ಅವರ ಕೆಲಸವು ಹಗುರಾಗಿತ್ತು. ಈ ತೊಡಕುಗಳಲ್ಲಿ ಎರಡು ಮೂರು ದುಷ್ಟ ದನಗಳಕೂಡ ಒಂದೆರಡು ಸುಷ್ಟ ದನಗಳು ಸಿಕ್ಕರೆ ಅವುಗಳ ಜೊಗಳೆ ನೋಡ ಲಾರರು. ಒಂದನ್ನೊಂದು ಎಳೆಯುತ್ತ, ಎಡವುತ್ತ, ತುಳಿಯುತ್ತ ಮತ್ತು ಒಮ್ಮೊಮ್ಮೆ ಇರಿಯುತ್ತ ಆ ದನಗಳ ಹಿಂಡುಸಾಗಿತು, ತನ್ನಕೂಡ ತೊಡಕಿಸಿದ

ಅಡನಾಡಿದನಗಳನ್ನು ಎಳೆದೆಳೆದು ಅಥವಾ ಹೊಟ್ಟೆಯಲ್ಲಿ ಕೋಲಿಲ್ಲದೆ ದಣೆದು ಯಾವದಾದರೊಂದು ಹೋರಿ ನಿಂತು ಬಿಟ್ಟರೆ ಕೈಯಲ್ಲಿಯ ಬಡಿಗೆಯಿಂದ ಕಟಕರ ಹುಡುಗನು ಚಿರ್ಚಿನಂತೆ ಆ ಹೋರಿಯ ಮೇಲೆ ಸಾಗಿ ಹೋಗುತ್ತಿದ್ದನು. ಕೂಡಲೆ ಆ ಹೋರಿ ಮುಂದೆ ಧಾವಿಸುತ್ತಿತ್ತು. ತಮ್ಮ ಮುಂಚಿನ ಒಡೆಯನು ತಮ್ಮನ್ನು ಏಕೆ ಬಿಟ್ಟನು ? ಈಗಿನವನು ತಮ್ಮನ್ನು ಏಕೆ ಹೀಗೆ ಪೀಡಿಸುವನು? ತಾವು ಎರಿ ಏಕೆ ಹೋಗುತ್ತಿರುವೆವು ? ಇವೆಲ್ಲ ತಿಳಿಯದೆ ದಾರೀ ಹಿಡಿದು ನಡೆಯುವ ದನಗಳನ್ನು ನೋಡಿದರೆ ಯಾರ ಹೃದಯದಲ್ಲಾದರೂ ಔದಾಸೀನ್ಯದ ಕತ್ತಲೆಯು ಪಸರಿಸದೆ ಇರಲಾರದು.

ಆ ದನಗಳ ಸಮೂಹದ ಮುಂಭಾಗದಲ್ಲಿ ಒಂದು ಎತ್ತು ನಡೆದಿತ್ತು. ಅದು ಇಣಿಗೂಡಿಸಿ ಪೂರ ಎಂಟು ಗೇಣು ಇದ್ದದ್ದರಿಂದ, ಅದರ ಜೊತೆಗೆ ತೊಡಕಿಸಲಿಕ್ಕೆ ಬೇರೆ ದನಗಳು ಸಿಗದ್ದರಿಂದ, ಅದನ್ನೊಂದನ್ನೇ ಬಿಟ್ಟಿರಬಹುದು. ಅಥವಾ ಅದನ್ನು ನೋಡಿದ ಕೂಡಲೆ ಕಟಕರ ಮನಸ್ಸಿನಲ್ಲಿ ಸಹ ಪೂಜ್ಯಭಾವ ಹುಟ್ಟಿ, ಅಂಥ ಸಂಭಾವಿತ ಮತ್ತು ಭವ್ಯ ಎತ್ತಿಗೆ ಹಗ್ಗಹಚ್ಚಿ ಅದರ ಅಪಮಾನ ಮಾಡಬಾರದೆಂದು ಅವರು ಬಿಟ್ಟಿರಬಹುದು. ತುಂಬಿದ ಕೊಡದಂತೆ ಕಾಣುವ ಅದರ ಇಣಿಯ ಮೇಲೆ ಕಟಕರು ತಮ್ಮ ಉಳಿದ ಹಗ್ಗಗಳ ಸುರಳಿಯನ್ನು ಹಾಕಿದ್ದರು. ಎತ್ತು ಅತಿಶಯ ಸೊರಗಿದ್ದರಿಂದ ಅದರ ತಿಗದ ಮೇಲಿನ ಎಲವಿನ ಮೇಲೆ ಸಹ, ಹಗ್ಗದ ಸುರಳಿ ಇಡುವಂತೆ ಇತ್ತು. ಎಷ್ಟು ನೋತಿದ್ದರೂ ಸಹ ಅದು ತನ್ನ ನಡಿಗೆಯ ಅಂದ ಬಿಟ್ಟಿದ್ದಿಲ್ಲ. ತನ್ನ ಬೆನ್ನಮೇಲೆ ಅಂಬಾರಿಯನ್ನು ಹೊತ್ತು ಅದರಲ್ಲಿ ಸಾರ್ವಭೌಮರು ಮೆರೆಯುವಾಗ ಪಟ್ಟದಾನೆ ಎಷ್ಟು ಅಭಿಮಾನದಿಂದ ಮತ್ತು ಗಾಂಭೀರ್ಯದಿಂದ ಪದನ್ಯಾಸ ಮಾಡುವದೊ ಅಷ್ಟು ಗಾಂಭೀರ್ಯದಿಂದ ಈ ಎತ್ತು ನಡೆದಿತ್ತು. ಎಷ್ಟೇ ಸಾವಕಾಶ ನಡೆದರೂ ಅದರ ಹೆಜ್ಜೆಗಳು ದೊಡ್ಡವಾದ್ದರಿಂದ ಎಷ್ಟೋಸಲ ಮಿಕ್ಕದನಗಳು ಹಿಂದೆ ಉಳಿಯುತ್ತಿದ್ದವು. ಆಗ್ಗೆ ಆ ಎತ್ತು ತನ್ನ ಚಿಕ್ಕಪುಟ್ಟ ಬಾಂಧವರನ್ನು ಕಾಯುತ್ತ ನಿಲ್ಲುತ್ತಿತ್ತು. ಈ ದನಗಳು ತಮ್ಮೊಳಗೆ ಹೊಡೆದಾಡುವದನ್ನು ನೋಡಿ ಅದಕ್ಕೆ ಆಶ್ಚರ್ಯವಾಗುವಂತೆ ಕಾಣುತ್ತಿತ್ತು. ಈ ಎತ್ತಿನ ಜನ್ಮಕಾಲಕ್ಕೆ ಅದರ ತಾಯಿಗೆ ಎಷ್ಟು ಆನಂದ ಆಗಿದ್ದೀತು. ಅದರಂತೆ ಆಕಳ ಒಡಯನಿಗಾದರೂ ಚೊಚ್ಚಿಲ ಗಂಡುಮಗ ಹುಟ್ಟಿದಂತೆ ಅನಿಸಿರಬಹುದು. ಇದು ಸ್ವಲ್ಪದೊಡ್ಡವಾದ

ಮನೆಯಲ್ಲಿಯ ಚಿಕ್ಕಮಕ್ಕಳು ತಮ್ಮ ಎಡೆಯಲ್ಲಿಯ ಬೆಣ್ಣೆರೊಟ್ಟಿಯನ್ನು ಪ್ರೇಮದಿಂದ ಇದಕ್ಕೆ ತಿನಿಸಿರಬಹುದು. ಇದು ದೊಡ್ಡದು ಆದಾದಹಾಗೆ ಕಾರ್ತ್ತುಣ್ಣಿವಿಗೆ ಮತ್ತು ಮಣ್ಣೆತ್ತಿನ ಅಮಾಸಿಗೆ ಇದನ್ನು ತೊಳೆದು ಪೂಜಿಸಿ ಶೃಂಗಾರ ಮಾಡುವದರಲ್ಲಿ ಮನೆಯಲ್ಲಿಯ ಎಲ್ಲರೂ ಪ್ರಹರಗಟ್ಟಲೆ ತೊಡಕಿರಬಹುದು. ಇದಕ್ಕೆ ದೃಷ್ಟಿ ತಾಕಬಾರದೆಂದು ಕಾಲಲ್ಲಿ ಕರಿ ಕಟ್ಟಿರಬಹುದು. ಮತ್ತು ಕೊರಳಲ್ಲಿಯ ಕಣ್ಣಿಗೆ ಗೊಂಬೀ ಕಟ್ಟಬಹುದು. ದೊಡ್ಡ ದೊಡ್ಡ ಬಂಡಿಗಳನ್ನು ಎಳೆಯುವ ಮೇಲಾಟದಲ್ಲಿ ಮಿಗಿಲಾದ್ದರಿಂದ ಇದಕ್ಕೆ ಬಹುಮಾನ ಮಾಡಿ ಇವರ ಕೊರಳಲ್ಲಿ ಹುಲ್ಲಿನ ಸರಬಿ ( ಬಹುಮಾನ ಸೂಚಕ ಕಣ್ಣಿ ) ಕಟ್ಟಿ ಮೆರವಣಿಗೆ ತೆಗೆದಿರಬಹುದು. ತನ್ನ ಒಡೆಯನ ಬೇಸಾಯದಲ್ಲಿ ಇದು ಹಲವು ತರದಿಂದ ನೆರವಾಗಿರಬಹುದು. ಆದರೆ ದೈವಗತಿಗೆ ಯಾರು ಏನು ಮಾಡುವರು ? ಆ ಎತ್ತಿಗೆ ಈಗ ತನ್ನ ಪೂರ್ವಾಯುಷ್ಯದ ನೆನಪು ಆಗುತ್ತಿದ್ದೀತು. ದನಗಳ ಸ್ಮರಣಶಕ್ತಿ ಪ್ರಬಲವಿರುತ್ತದೆಂದು ಅನುಭವ ಉಂಟು.— ಪೂರ್ವಾಯುಷ್ಯ ನೆನಸಿ ಪಾಪ ಏನು ಮಾಡೀತು ಪಾಲಿಗೆ ಬಂದುದನ್ನು ಅದುಭವಿಸಿಯೇ ತೀರಬೇಕು. ನಮಗಂತು ಆ ಆನೆಯಂಥ ಎತ್ತನ್ನು ಆ ದನಗಳ ಹಿಂಡನ್ನು ನೋಡಿ, ಅನೇಕ ವರ್ಷ ಸೌಖ್ಯದಿಂದ ಮತ್ತು ಐಶ್ವರ್ಯಗಳಿಂದ ಪ್ರಪಂಚ ಮಾಡಿ ಕಡೆಗೆ ದುಷ್ಕಾಳ ಮೂಲಕ ಕುಟುಂಬ ಸಹಿತ ಗುಳೆ ಹೋಗುವ ಮಾನಧನ ಪ್ರಪಂಚಕನ ನೆನಪು ಆಯಿತು.



# ದುರ್ಗಗಳೇ !



ನಿಮ್ಮನ್ನು ನೋಡಿ ಕನಿಕರ ಬರುತ್ತದೆ. ಮುನ್ನೂರು ವರ್ಷಗಳಾಚೆಗೆ ಯಾರಾದರೂ ಬಂದು, ಮುಂದೆ ನಿಮ್ಮ ಅವಸ್ಥೆ ಹೀಗಾಗುವದೆಂದು ಹೇಳಿದ್ದರೆ ನೀವು ನಂಬುತ್ತಿದ್ದಿರೋ ? ನೀವೇ ಏಕೆ ಈ ಭವಿಷ್ಯವನ್ನು ಆ ಕಾಲದ ಮಹಾ ಮಹಾ ಮೇಧಾವಿಗಳು ಸಹ ನಂಬುತ್ತಿದ್ದಿಲ್ಲ.

ನಿಮ್ಮ ಸುತ್ತಲಿನ ಯಾವ ಕೊಳ್ಳಗಳಲ್ಲಿ ಜೀವದ ಪರಿವೆಯಿಲ್ಲದೆ ಹೋರಾಡುವ ವೀರರ ರಣಘೋಷವು ಒಂದು ಕಾಲಕ್ಕೆ ತುಂಬುತ್ತಿತ್ತೊ, ಅದೇ ಕೊಳ್ಳಗಳಲ್ಲಿ ವನ್ಯಪಶುಗಳ ಚೀರಾಟದ ಹೊರ್ತು ಮತ್ತೇನೂ ಕೇಳಿಸುವದಿಲ್ಲ. ಯಾವ ಹಾದಿಗಳಲ್ಲಿ ಕುದುರೆ ಆನೆ ಪಲ್ಲಕ್ಕಿಗಳ ಸಾಲು ಹತ್ತುತ್ತಿತ್ತೊ ಆ ಹಾದಿಗಳ ಮೇಲೆ ಈಗ ಹುಲ್ಲು ಬೆಳೆದು ಅವು ನಾಮಶೇಷ ಆಗಿರುವವು. ಗುಡ್ಡದೋರೆಯಲ್ಲಿಯ ಹಳ್ಳಿಗಳಂತೂ ನೋಡಲಿಕ್ಕೇ ಬೇಡ. ಯಾವ ಹಳ್ಳಿಗಳಲ್ಲಿಯ ಪ್ರತಿಯೊಬ್ಬ ತರುಣನು ತಾನು ಸೂರ್ಯಾಜೀ ತಾನಾಜೀ ಅಥವಾ ಪ್ರತ್ಯಕ್ಷ ಶಿವಾಜಿಯಂತೆ ಶೂರನಾಗಿ ಮೆರೆಯುಬಹುದೆಂದು ಆಕಾಂಕ್ಷೆ ಪಡುತ್ತಿದ್ದನೋ ಅದೇ ಹಳ್ಳಿಗಳಲ್ಲಿ ಹ್ಯಾಗಾದರೂ ದಿವಸ ಹಾಕುತ್ತ ಮರಣದ ಮಾರ್ಗ ಪ್ರತೀಕ್ಷೆ ಮಾಡುವ ಒಕ್ಕಲಿಗರನ್ನು ಕಾಣಬಹುದು.

ಗೋಡೆಗಳು; ಇವುಗಳಿಗೆ ಕೋಟೆಯ ಗೋಡೆಗಳೆಂದು ಯಾರನ್ನಬೇಕು ಸಿಕ್ಕ ಸಿಕ್ಕ ಗಿಡಗಳು ಹತ್ತಿ ಅವುಗಳ ಬೇರು ಮತ್ತು ಶಾಖೆಗಳು ಮುದಿಕೆಯ ಮೈಮೇಲಿನ ನರಗಳಂತೆ ಎಲ್ಲ ಕಡೆಗೂ ಹಬ್ಬಿದ್ದರಿಂದ ಗೋಡೆಗಳ ಅಂದವು ಕೆಟ್ಟು ಹೋಗಿದೆ. ಹಲವು ಸ್ಥಳಗಳಲ್ಲಿ ಗೋಡೆ ಬಿದ್ದದ್ದರಿಂದ ಆ ನಿಟ್ಟಿಗೆ ಹಲ್ಲು ಬಿದ್ದ ಬಾಯಿಯ ವಿಕೃತ ಸ್ವರೂಪ ಬಂದಿರುವದು. ಯಾವ ಗೋಡೆಗಳ ಮೇಲೆ ಎಲ್ಲ್ಯಾದರೊಂದು ಹುಲ್ಲಿನ ಕಡ್ಡಿ ಕಂಡರೆ ದುರ್ಗರಕ್ಷಕರು ಕಠಿಣ ಶಿಕ್ಷೆಗೆ ಗುರಿಯಾಗುತ್ತಿದ್ದರೋ ಅವೇ ಗೋಡೆಗಳ ಮೇಲೆ ಹಬ್ಬಿದ ಗಿಡಗಂಟೆಗಳಲ್ಲಿ ಡೊಣ್ಣೀಕಾಟಗಳು ನಿಶ್ಶಂಕವಾಗಿ ಓಡಾಡುವವು.

ದುರ್ಗದ ಒಳಭಾಗದಲ್ಲಿ ಎಲ್ಲಿ ನೋಡಿದರೂ ಬಿದ್ದ ಮನೆಗಳ, ಹಾಳು ದಿಬ್ಬಗಳ ಹೊರ್ತಾಗಿ ಏನೂ ಕಾಣುವದಿಲ್ಲ. ಯಾವ ಪ್ರಾಸಾದದಲ್ಲಿ ಭೂತ ಕಾಲದ ಇತಿಹಾಸ ಬರೆಯಲ್ಪಟ್ಟಿತ್ತೊ, ಯಾವ ಅರಮನೆಗಳಲ್ಲಿ ನಡೆದ ಕಾರಸ್ಥಾನಗಳಿಂದ ದೊಡ್ಡ ದೊಡ್ಡ ಸಾಮ್ರಾಜ್ಯಗಳು ಹುಟ್ಟಿದವೋ ಮತ್ತು ನಾಶ ಹೊಂದಿದವೋ ಆ ಪ್ರಾಸಾದದ ಕುರುಹು ಈಗ ಒಂದು ದೊಡ್ಡ ದಿಬ್ಬದ ರೂಪದಿಂದ ಮಾತ್ರ ಕಾಣುವದು. ತಮ್ಮ ಖುರಪುಟದ ಖಡಖಡಾಟದಿಂದ ಎಲ್ಲ ದೇಶವನ್ನು ಗದಗಮಿಸಿದ ಜಾತಿಯ ಕುದುರೆಗಳ ಲಾಯದ ಮೇಲೆ ಈಗಿನ ಕಾಲಕ್ಕೆ ಡಬಗಳ್ಳಿಯು ಬೆಳೆದಿರುತ್ತದೆ. ಗುಪ್ತ ಮಾರ್ಗಗಳೂ ಮದ್ದಿನ ಮನೆಗಳೂ ಶಸ್ತ್ರಾಗಾರಗಳೂ ಕೋಶಾಗಾರವೂ ಮುಂತಾದವು ಹೇಳಹೆಸರಿಲ್ಲದೆ ಮಾಯವಾಗಿರುವವು.

ಹೆಬ್ಬಾಗಿಲಗಳ ಗತಿಯಂತೂ ಕೇಳಲಿಕ್ಕೆ ಬೇಡ. ಆನೆಗಳಿಗೆ ಸಹ ಜೋರಿನಿಂದ ಹಾಯ್ದು ಕೆಡವಲಿಕ್ಕೆ ಬರಬಾರದೆಂದು ಕೂರಾದ ಮಳೆಗಳಿಂದ ತುಂಬಿದ ಬಾಗಿಲಗಳನ್ನು ಒಡೆದು ಅವುಗಳ ಕಟ್ಟಿಗೆಯಿಂದ ಕೈ ಕಾಯಿಸಿಕೊಂಬ ಪುಣ್ಯಾತ್ಮರಿಗೇನು ಕಡಿಮೆ? ಯಾವ ದಾರಿಗಳು ನೂರಾರು ಯುದ್ಧದ ಸಮರಾಂಗಣ ಆಗಿರಬಹುದೋ, ಎಲ್ಲಿಯ ಹಾಸುಗಲ್ಲುಗಳು ಅಸಂಖ್ಯ ಸಲ ವೀರರ ಮಾಂಸ ರಕ್ತಗಳಿಂದ ಮುಚ್ಚಿರಬಹುದು ಅವೆಲ್ಲವುಗಳು ಈಗ ಸ್ಮಶಾನ ಶಾಂತತೆಗೆ ಎಡೆಯಾಗಿರುವವು. ಒಟ್ಟಾರೆ, ಈ ದುರ್ಗಗಳನ್ನು ನೋಡಿ ಚಮತ್ಕಾರ ನಿಕೇತ ( Musium ) ದಲ್ಲಿಯ ತಿಮಿಂಗಲ ಮೀನದ ಎಲವಿನ ಹಂದರವು ನೆನಪಾಗುವದು.

# ಐದು ಕೊಡಗಳ ಆತ್ಮಕಥೆ



ಗಾಂಧಿ ಯುಗದಲ್ಲಿ ಏನು ಆದೀತು ಏನು ಆಗಲಿಕ್ಕಿಲ್ಲ! ಇದರ ಕಲ್ಪನೆ ಸಹ ಮಾಡುವದಾಗುವದಿಲ್ಲ. ಬಾಹ್ಯದೃಷ್ಟಿಗೆ ಅತ್ಯಂತ ಸ್ವಾರ್ಥಿಗಳೆಂದು ಹೆಸರಾದ ಜನರು ತಮ್ಮ ಮನೆ ಮಕ್ಕಳ ಮೇಲೆ ತುಳಸಿಪತ್ರ ಇರಿಸಲೂ ಸಿದ್ಧವಾಗಿರುವದನ್ನೂ ಎಷ್ಟೋ ಹೇಡಿಗಳು ಇಂದು ತಮ್ಮ ಪ್ರಾಣಾಹುತಿಯನ್ನೇ ಕೊಡಲು ಮುಂದೆ ಬಂದಿರುವದನ್ನು ನೋಡಿದರೆ ನಾವೇನು ಸ್ವಪ್ನ ಸೃಷ್ಟಿಯಲ್ಲಿರುವೆವೋ ಏನೋ ಎಂದು ಅನಿಸಬಹುದು. ಇಂಥ ಒಂದು ವಿಚಿತ್ರ ಘಟನೆಯು ಬಾಗಲಕೋಟೆಯ ಜೇಲಿನಲ್ಲಿ ನಡೆದದ್ದು ನನ್ನ ಅನುಭವಕ್ಕೆ ಬಂದಿತು ಅದನ್ನೆ ನನ್ನ ಗೆಳೆಯರ ಲಾಭಕ್ಕಾಗಿ ಇಲ್ಲಿ ಸಂಕ್ಷಿಪ್ತ ರೂಪದಲ್ಲಿ ಕೊಡುತ್ತಿದ್ದೇನೆ.

ನಾನು ಆದಿನ ಬಾಗಲಕೋಟೆಯ ಜೇಲಿನಲ್ಲಿದ್ದೆ. ಬ್ರಿಟಿಶ್ ಸರಕಾರದ ಆತಿಥ್ಯ. ನನ್ನ ಕೋಣೆಯಲ್ಲಿಯೇ ೫ ಹಿತ್ತಾಳಿ ಕೊಡಗಳಿದ್ದವು. ಅವು ಅಲ್ಲಿ ಹೇಗೆ ಬಂದವು? ಯಾಕೆ ಬಂದವು ಎಂಬುದನ್ನು ತಿಳಿದುಕೊಳ್ಳುವ ಕುತೂಹಲ ಉಂಟಾಯಿತು. ಆದರೆ ಯಾರಿಗೆ ಕೇಳಬೇಕು ? ನನ್ನ ಕೋಣೆಯ ಕಾವಲುಗಾರನನ್ನು ನೋಡಿದರೆ ಅವನೊಬ್ಬ ಸೂತ್ರದಗೊಂಬೆ. ತಾನು " ಡ್ಯೂಟಿ " ಮೇಲೆ ಇದ್ದಾಗ ಕೈದಿ ಇರಲಿ ಅಥವಾ ಏನೆ ವಸ್ತುಗಳಿರಲಿ ಅವನ್ನು ಇದ್ದಕ್ಕಿದ್ದಂತೆ ತನ್ನ ಬದಲಿಯಾಗಿ ಬಂದವನಿಗೆ ಒಪ್ಪಿಸುವದಷ್ಟೆ ಗೊತ್ತು. ಆದರೆ ಆ ಕೊಡಗಳ ಕಡೆಗೆ ಮೇಲಿಂದ ಮೇಲೆ ನೋಡಿದಂತೆ ನನ್ನ ಕುತೂಹಲವು ಮಾತ್ರ ಬೆಳೆಯತೊಡಗಿತು. ಅವುಗಳ ಮೈತುಂಬ ಬಿದ್ದ ತಗ್ಗುಗಳು ಕಂಟಕುಸಿದು ವಿದ್ರೂಪವಾದ ಅವುಗಳ ಸ್ವರೂಪ, ಅವುಗಳಲ್ಲಿ ಅಲ್ಲಲ್ಲಿ ಕಾಣುವ ಛಿದ್ರಗಳು, ಮತ್ತು ಅನೇಕ ದಿನಗಳ ವರೆಗೆ ಕೈಯಾಡಿಸದೆ ಬಿಟ್ಟಿದ್ದರಿಂದ ಹಸಿರುಗಟ್ಟಿ ಹೋದ ಅವುಗಳ ಬಣ್ಣ, ಇವನ್ನೆಲ್ಲ ನೋಡಿದರೆ ಈ ಕೊಡಗಳೂ

ನಹ ಮನುಷ್ಯರಂತೆಯೇ ಈ ಸಂಸಾರಸಾಗರದಲ್ಲಿ ಅನೇಕ ಹೊಡೆತಕ್ಕೆ ಸಿಕ್ಕು ಕಡೆಗೆ " ಇಲ್ಲಿಗೆ " ಬಂದಿರಬಹುದೆಂದು ಅನಿನತೊಡಗಿತು. ದುಷ್ಟ ಹಾಗೂ ಕ್ರೂರವಾದ ಬಾಹ್ಯ ಜಗತ್ತಿನಿಂದ ತಮ್ಮ ಬೆಂದು ಹೋದ, ನೊಂದ ಅಂತಃಕರಣವನ್ನು ಮಾಮಲೇದಾರ ಕಚೇರಿಯ ಈ ಚಿಕ್ಕ ಕೋಣೆಯಲ್ಲಿ ಬಚ್ಚಿಟ್ಟು ಕೊಳ್ಳಲು ಇಲ್ಲಿಗೆ ಬಂದಿರಬೇಕೆಂದು ಅನಿಸಿತು. ಅಂತೂ ಸಂಜೆಯಾದರೂ ನನಗೆ ಆ ಕೊಡಗಳ ನಿಜ ಸಂಗತಿಯೇ ಗೊತ್ತಾಗಲಿಲ್ಲ. ರಾತ್ರಿಯಾದರೂ ನನ್ನ ಮನಸ್ಸಿನಲ್ಲಿ ಇನ್ನೂ ಅದೇ ವಿಚಾರವೆ ಕಟೆಯುತ್ತಿತ್ತು.

ರಾತ್ರಿ ಸುಮಾರು ೧೧ ಗಂಟೆಯಾಗಿರಬಹುದು. ನಾನು ಇನ್ನೂ ತೂಕಡಿಸುತ್ತಿದ್ದೆ, ಅಷ್ಟರಲ್ಲಿ ಕಾಲ ಕೆಳಗೆ ಏನೋ ಸರಿದಾಡಿದಂತೆ ಭಾಸವಾಯಿತು. ಇಲಿಗಳೇನಾದರೂ ಇರಬಹುದೆಂದು ಮತ್ತೊಂದು ಬದಿಗೆ ಹೊರಳಿದೆ. ಪುನಃ ಮತ್ತೊಮ್ಮೆ ಅದೇ ಪ್ರಕಾರದ ಸಪ್ಪಳವಾಯಿತು. ಈ ಸಾರೆ ಸ್ವಲ್ಪ ಹೆಚ್ಚು ಲಕ್ಷ ಕೊಟ್ಟು ಆ ಕಡೆಗೆ ನೋಡಲು, ನನ್ನ ಕಾಲ ಹತ್ತಿರ ಮೂಲೆಯಲ್ಲಿಟ್ಟಿದ್ದ ಕೊಡವು ಎರಡನೇ ಕೊಡದ ಕಡೆಗೆ ಸರಿಯುವದು ಕಾಣಿಸಿತು. ನಾನು ಆಶ್ಚರ್ಯದಿಂದ ಅವಕ್ಕಾದೆ. ಚಳಿಗಾಲದಲ್ಲಿ ಚಳಿ ಕಾಯಿಸಲು ಬೈಲಿನಲ್ಲಿ ಹಳ್ಳಿಗರು ಗುಂಪು ಕಟ್ಟಿಕೊಂಡು ಕೂಡುವಂತೆ, ಆ ಐದೂ ಕೊಡಗಳು ಕೂಡಿಕೊಂಡವು. ಅವದೊಳಗೆ ಒಂದು ಕೊಡದ ಬಾಯಿಂದ ಕೆಲವು ಶಬ್ದಗಳೂ ಸಹ ಹೊರಟಂತೆ ಕೇಳಿಸಿತು. ಛೆ! ಕೊಡಗಳೆಂದಾದರೂ ಮಾತಾಡಬಹುದೆ? ಎಂದು ವಿಚಾರ ಮಾಡುತ್ತಿರುವಾಗ " ಎ ಭಾಳ ಬ್ಯಾಸರಕಿ ಬಂದದ ಒಂದು ಚುಟ್ಟಾ ಅರೆ ಇದ್ದರ ತಗಿ ಅಲಾ " ಎಂದು ಆ ಕೊಡವು ಅನ್ನುವದು ಸ್ಪಷ್ಟವಾಗಿ ಕೇಳಿಸಿತು. ಮುಂದೆ ಆ ಐದೂ ಕೊಡಗಳು ತಮ್ಮ ತಮ್ಮೊಳಗೆ ಏನೋ ಮಾತಾಡತೊಡಗಿದವು ಕುತೂಹಲ ಕೆರಳಿ ಮತ್ತಷ್ಟು ಕಿವಿಗೊಟ್ಟು ಕೇಳಿದೆ. ಅವು ತಮ್ಮ ತಮ್ಮೊಳಗೆ ತಾವು ಮಾಮಲೇದಾರ ಕಚೇರಿಯ ಈ ಕೋಣೆಯೊಳಗೆ ಹೇಗೆ ಬಂದೆವೆಂಬುದರ ಇತಿಹಾಸವನ್ನು ಹೇಳುತ್ತಿದ್ದವು. ಒಂದು ಕೊಡವು ತನ್ನ ಆತ್ಮಕಥೆಯನ್ನು ಹೇಳುವಾಗ ಉಳಿದವುಗಳು ಅದನ್ನು ಲಕ್ಷ ಕೊಟ್ಟು ಕೇಳುತ್ತಿದ್ದವು.

ನಾನಿನ್ನೂ ಆಗ ಅರನಿಷ್ಟೆಯಲ್ಲಿಯೇ ಇದ್ದೆ. ಆದ್ದರಿಂದ ಅವು ಹೇಳಿದ್ದೆಲ್ಲಾ ನನ್ನ ಲಕ್ಷ್ಯದಲ್ಲಿ ಉಳಿದಿಲ್ಲ. ಆದರೂ ಸ್ಮರಣೆಯಲ್ಲಿದ್ದಷ್ಟನ್ನೆ ಹೇಳುತ್ತಿರುವೆನು.

## ಒಂದನೇ ಕೊಡದ ಆತ್ಮಕಥೆ

“ ಗೆಳೆಯರೇ ನನ್ನ ಈ ಅವತಾರದ ಕಡೆಗೆ ನೋಡಿ ನಗಬೇಡಿರಿ. ನನ್ನ ಮೈತುಂಬ ಈಗ ತೂತು ತಗ್ಗುಗಳು ಬಿದ್ದಿವೆ. ಮತ್ತು ಕಂಠವೂ ಕುಸಿ ಬಿದ್ದಂತೆ ಕಾಣಬಹುದು. ಆದರೆ ನಾನು ಜನ್ಮತಃ ಹೀಗೆ ಇದ್ದೇನೆಂದು ಮಾತ್ರ ತಿಳಿಯಬೇಡಿರಿ. ನಾನೂ ಎಷ್ಟೋ ಸುದಿನಗಳನ್ನು ಕಂಡಿದ್ದೇನೆ. ಒಂದು ಊರಿನ ಒಬ್ಬ ಕಂಚಗಾರನ ಮನೆಯಲ್ಲಿ ನನ್ನ ಜನ್ಮವಾಯಿತು. ನನ್ನ ಆಗಿನ ಮನಮೋಹಕ ರೂಪ ಹಾಗೂ ಮೈಕಟ್ಟನ್ನು ಕಂಡು ಕಂಚುಗಾರನ ಹೆಂಡತಿಯು, ಹುಚ್ಚಾಗಿ ನನ್ನನ್ನು ಮಾರಬಾರದೆಂದು ಹಟ ಹಿಡಿದಳು. ಆದರೆ ಅದು ಕಂಚುಗಾರನ ಮನಸ್ಸಿಗೆ ಬರಲಿಲ್ಲ. ತಾನು ಮಾಡಿದ ಕೊಡಗಳ ಸಲು ವಾಗಿ ಹೀಗೆ ಹಟ ಹಿಡಿಯುತ್ತ ಕುಳಿತರೆ, ಮನೆ ತುಂಬೆಲ್ಲ ಕೊಡಗಳನ್ನೇ ಇಟ್ಟುಕೊಂಡು ಹೊಟ್ಟೆಗೆ ಕೇರು ಹಾಕಿಕೊಳ್ಳುವ ಪ್ರಸಂಗ ಬಂದೀತೆಂದು ನಿಷ್ಠುರವಾಗಿ ಹೇಳಿದನು. ಹೆಂಡತಿಯ ಉತ್ತರ ಕೂಡ ಕಾಯದೇ, ನನ್ನನ್ನು ಎತ್ತಿಕೊಂಡು ಒಬ್ಬ ವ್ಯಾಪಾರಿಗೆ ಕೊಟ್ಟು ಬಂದನು. ಅಲ್ಲಿ ನನ್ನ ಬಳಗದವ ರೊಂದಿಗೆ ನಾನು ಎರಡು ತಿಂಗಳವರೆಗೆ ಮಾತ್ರ ಇದ್ದೆನು. ಮುಂದೆ ವೈಶಾಖ ಮಾಸವು ಬಂದಿತು. ಹತ್ತಿಯ ವ್ಯಾಪಾರವು ಅದೇ ಪ್ರಾರಂಭವಾಗಿತ್ತು. ಆ ಸುಮಾರಿಗೆ ದಂಪತಿಗಳ ಜೋಡಿಯೊಂದು ನಾನಿದ್ದ ಅಂಗಡಿಗೆ ಬಂದಿತು. ಅವರಿಗೆ ಒಂದು ಕೊಡವನ್ನು ಕೊಳ್ಳುವದಿತ್ತು. ಅವರು ಬಡವರಿದ್ದರೂ ಹತ್ತಿಯ ಸುಗ್ಗಿಯಲ್ಲಿ ೧೫-೨೦ ರೂಪಾಯಿಗಳನ್ನುಳಿಸಿದ್ದರು. ಈ ರೂಪಾಯಿ ಗಳಿಂದ ತನಗೊಂದು ಜರದಂಚಿನ ರೂಮಾಲು, ಹೆಂಡತಿಗೊಂದು ಸೀರೆ ತೆಗೆದು ಕೊಳ್ಳಬೇಕೆಂದು ಗಂಡನ ವಿಚಾರವಿತ್ತೆಂದು ನನಗೆ ನಂತರ ತಿಳಿಯಿತು. ಅವರು ಅಂಗಡಿಗೆ ಬಂದಾಗ ಬರಿ ಗಂಡನ ತಲೆಯ ಮೇಲೆ ಅಷ್ಟೆ ಹೊಸ ರೂಮಾಲು ಕಂಡು ಬಂದರೂ, ಹೆಂಡತಿಯ ಆಗ್ರಹದ ಮೇರೆಗೆ ಸೀರೆ ತೆಗೆದುಕೊಳ್ಳದೆ ಒಂದು ಹಿತ್ತಾಳೆಯ ಕೊಡ ತೆಗೆದುಕೊಳ್ಳುವದನ್ನು ಅವರು ನಿಶ್ಚಯಿಸಿದಂತೆ ತೋರಿತು. ಅಂಗಡಿಯೊಳಗಿದ್ದಷ್ಟೆಲ್ಲ ಕೊಡಗಳನ್ನು ತಿರುವಿ ಹಾಕಿದರೂ ಆ ಮಹಾರಾಯಳ ಮನಸ್ಸಿಗೆ ಒಂದೂ ಬರಲಿಲ್ಲ. ಕಟ್ಟಕಡೆಗೆ ನಾನು ಆಕೆಯ ಕೈಗೆ ಸಿಕ್ಕಿದೆ. ಆಕೆಯ ದರ್ಶನದಿಂದಲೇ ನಾನು ಮೋಹಿತನಾಗಿದ್ದೆ. ಹಾಗೂ ಕರ್ಮ ಧರ್ಮ

ಸಂಯೋಗದಿಂದ ನನ್ನನ್ನೇ ಆಕೆಯು "ಪಾಸು" ಮಾಡಿದಳು. ಒಂದು ಯಃಕಶ್ಚಿತ್ ಕೊಡದ ಸಲುವಾಗಿ ಇಷ್ಟು ಚಾಕಸಿ (ಜಿಕೇರಿ) ಮಾಡಿದ್ದಕ್ಕಾಗಿ ಆಕೆಯ ಗಂಡ ಎಷ್ಟು ಗೇಲಿ ಮಾಡಿದರೂ ಆಕೆಯೇನೂಮಣಿಯಲಿಲ್ಲ. ನನ್ನ ತೂಕ ಮಾಡಿ ಅಂಗಡಿಕಾರನು ಬೆಲೆಯನ್ನು ಹೇಳಿದ. ಅದು ಬಹಳವೆನಿಸಿ ಎಲ್ಲಿ ಆಕೆ ನನ್ನ ಕೈ ಬಿಡುವಳೋ ಎಂದು ಹೆದರಿದೆ. ಆದರೆ ಮುಂದೆ ಇಬ್ಬರೂ ಸಲ್ಪ ಜಗ್ಗಾಡಿ, ಒಂದು ಬೆಲೆಯನ್ನು ಗೊತ್ತು ಮಾಡಿ ನನ್ನನ್ನು ತಕ್ಕೊಂಡರು. ನಾನು ಆ ದಂಪತಿಗಳ ಜೊತೆಗೆ ಅವರೂರಿಗೆ ಹೊರಟೆ. ದಾರಿಯಲ್ಲಿ ನನ್ನನ್ನು ಅವರು ತಮ್ಮ ಪ್ರೀತಿಯ ಮಗನಂತೆ ಹೆಗಲಮೇಲೂ ಬಗಲಲ್ಲಿಯೂ ಕರೆದು ಕೊಂಡು ಹೊರಟರು.

ಅಂತೂ ನಾನೊಂದು ಹಳ್ಳಿಯ ಜೀವಿಯಾದೆ. ನನ್ನನ್ನು ಕೊಂಡುತಂದ ಮನೆಯಲ್ಲಿ ಮಣ್ಣಿನ ಮಡಿಕೆಗಳೆ ಹೆಚ್ಚಾಗಿದ್ದುದರಿಂದ ನಾಲ್ಕು ಹಿತ್ತಾಳೆಯ ಸಾಮಾನುಗಳಲ್ಲಿ ನಾನೇ ಅಗ್ರ ಸ್ಥಾನವನ್ನು ಪಡೆದೆ. ನನ್ನನ್ನು ತಂದ ಎರಡನೇ ದಿವಸದಿಂದಲೇ ನನ್ನ "ಅಪ್ಪ" ನನ್ನನ್ನು ಬಗಲಲ್ಲಿ ಕೂಡಿಸಿ ಕೊಂಡು ನೀರಿಗೆ ಹೊರಟಳು. ಆಕೆ ನನ್ನನ್ನು ಪ್ರೀತಿಸುವದನ್ನು ನೋಡಿದರೆ ಆಕೆಯನ್ನು ಅಪ್ಪನೆಂದೇ ನಾನು ಕರೆಯಬೇಕು. ಆಕೆಗೆ ಇತರರು ಚಿನ್ನವ್ವ ಎಂದು ಕರೆಯುತ್ತಿದ್ದರು. ನದಿ ಮುಟ್ಟುವದರೊಳಗೆ ಕನಿಷ್ಠ ೪೦–೫೦ ಜನ ರಾದರೂ ಚಿನ್ನಪ್ಪನಿಗೆ ' ಈ ಕೊಡ ಎಲ್ಲಿಂದ ತಂದೆ, ಎಷ್ಟು ಕೊಟ್ಟೆ, ತೂಕ ಎಷ್ಟಿದೆ, ಹೆಸರು ಹಾಕಿಸಿದೆಯಾ ' ಎಂದು ಮುಂತಾದ ನೂರಾರು ಪ್ರಶ್ನೆಗಳನ್ನು ನನ್ನ ಬಗ್ಗೆ ಕೇಳುತ್ತಿದ್ದರು. ಅವಳು ಅದಕ್ಕೆಲ್ಲ ಉತ್ತರ ಕೊಡುತ್ತ ನದಿ ಮುಟ್ಟಲು ೧೫ ನಿಮಿಷದ ಬದಲು ಒಂದು ತಾಸು ಹತ್ತಿತು. ಆದರೂ ಆಕೆಗೆ ಬೇಸರ ಬರಲಿಲ್ಲ. ನಾನು ಬಗಲೊಳಗೆ ತನ್ನ ಚೊಚ್ಚಲ ಮಗನೇ ಕುಳಿತಿರುವೆ ನೆಂದು ಆಕೆ ತಿಳಿದುಕೊಂಡು ಬಿಟ್ಟಿದ್ದಳು।

ನದಿಯಲ್ಲಿ ತಾನು ಜಳಕ ಮಾಡುವದಕ್ಕಿಂತ ಮುಂಚೆ ಚಿನ್ನವ್ವನು ನನ್ನ ಮೈಯನ್ನು ಹುಣಚೆ ಹಣ್ಣು ಹಚ್ಚಿ ಉಸುಕಿನಿಂದ ಸ್ವಚ್ಛವಾಗಿ ತೊಳೆ ದಳು. ನನ್ನನ್ನು ಎಷ್ಟೆ ತಿಕ್ಕಿದರೂ ಆಕೆಗೆ ಸಮಾಧಾನವಾಗಲಿಲ್ಲ. ಕಡೆಗೆ ಬಹಳ ತಡವಾದೀತೆಂಬ ಭಯದಿಂದ ನಿರುಪಾಯಳಾಗಿ ಮನೆಗೆ ತಿರುಗಿದಳು. ನನ್ನನ್ನು ಅಂಚು ಮಟ ತುಂಬಿ ತಲೆಯ ಮೇಲೆ ಇಟ್ಟುಕೊಂಡಳು ನನ್ನನ್ನು

ಎತ್ತಿಕೊಳ್ಳಲು ಆಕೆಗೆ ಆಸರ ಕೊಡಲು ಒಬ್ಬ ತರುಣ ಮುಂದೆ ಬಂದಿದ್ದ. ಆದರೆ ಚಿನ್ನವ್ವನು " ಇದೇನು ' ಫಗ್ಗರಿ, ಕೊಡ. ಏನೋ, ಇಟ ಐತಿ. ಇದ ಕ್ಯಾಕ ಎಡ್ಡೆದವರ ಕೈ " ಎಂದು ಅವನ ಸಹಾಯವನ್ನು ನಿರಾಕರಿಸಿದ್ದಳು. ನಾನೇನು ಚಿಕ್ಕವನಿರಲಿಲ್ಲ ನನ್ನನ್ನು ಒಬ್ಬಳೆ ಎತ್ತಿಕೊಂಡು ಹೋಗಿ ಚಿನ್ನವ್ವನಿಗೆ ಬಹಳ ಶ್ರಮವಾಗಿರಲೇಬೇಕು. ಆದರೆ ಆ ತರುಣನು ಅದೇ ಹೆಂಡೆಗಸ ಮಾಡಿ ( ಗೊಬ್ಬರ ತೆಗೆದು ) ಬಂದದ್ದರಿಂದ ಅವನ ಕೈ ಹೊಲಸು ನನ್ನ ಮೈಗೆ ಹತ್ತೀತೆಂಬುದೆ ಅವಳ ಭಯ. ಅದಕ್ಕಾಗಿಯೇ, ಆಕೆ ಅವನ ಸಹಾಯ ನಿರಾಕರಿಸಿದಳು.

ಚಿನ್ನವ್ವನನ್ನು ಕರಕೊಂಡು ಮನೆಗೆ ತಿರುಗಿದಳು. ಹಾದಿಯಲ್ಲಿ ಪುನಃ ಮೊದಲಿನ ಪ್ರಶ್ನೆಗಳನ್ನೇ ಮತ್ತೆ ಅನೇಕರು ಕೇಳಿದರು ಅದಕ್ಕೆಲ್ಲ ಆಕೆ ನಗುನಗುತ್ತಲೆ ಉತ್ತರ ಕೊಡುತ್ತಿದ್ದಳು. ಮನೆ ಬಾಗಿಲಿಗೆ ಬಂದ ಕೂಡಲೆ ನನ್ನನ್ನು ಇಳಿಸಿಕೊಳ್ಳಲು ಆಕೆ ತನ್ನ ಗಂಡನನ್ನು ಕರೆದಳು. ಅವನು ಕೂಡಲೆ ಎದ್ದು ಬಂದು, ಕೆಲ ನಿಮಿಷ ಆತ, ನನ್ನನ್ನೂ ತನ್ನ ಹೆಂಡತಿಯನ್ನೂ ಆಶೆಯಿಂದ ನೋಡಿ ಕೆಳಗೆ ಇಳಿಸಿ, ಅಡಿಗೆ ಮನೆಯಲ್ಲಿ ಸ್ವಚ್ಛವಾಗಿ ಸಾರಿಸಿದ ಒಂದು ಮೂಲೆಯಲ್ಲಿ ಇರಿಸಿದ.

ಈ ರೀತಿ ಆ ದಂಪತಿಗಳ ಅಚ್ಚುಮೆಚ್ಚಿನ ಚೊಚ್ಚಲ ಮಗನಾಗಿ ಆ ಮನೆಯಲ್ಲಿ ನಾನು ಆನಂದದಿಂದ ಇರುತ್ತಿದ್ದೆ. ಆದರೆ ಎಲ್ಲ ದಿನಗಳೂ ನಮುನೆಲ್ಲಿರಬೇಕು ? ಕಾಲ ಚಕ್ರ ತಿರುಗಿತು. ಭರಮಪ್ಪನು ಚಿನ್ನವ್ವನ ಗಂಡನು ಬಾಗಲಕೋಟೆಗೆ ಮೇಲಿಂದ ಮೇಲೆ ಹೋಗ ತೊಡಗಿದನು. ಒಬ್ಬ ಗೆಳೆಯನ ಕೃಪೆಯಿಂದ ಆತನಿಗೆ ಸುರಾಪಾನದ ವ್ಯಸನ ಹತ್ತಿತು. ಮೊದಲನೇಯ ದಿವಸ ಭರಮಪ್ಪ ಕುಡಿದು ಮನೆಗೆ ಬಂದಾಗ್ಗೆ ಏನು ಶೆರೆಯ ದುರ್ಗಂಧ ವಾಸವು ಹಬ್ಬಿತೋ ಅದರಿಂದ ಆ ಪುಟ್ಟ ಮನೆಯ ಪ್ರೀತಿಯ ಸುಗಂಧವು ಶಾಶ್ವತವಾಗಿ ಅಳಿದು ಹೋಯಿತು. ಚಿನ್ನವ್ವನ ಮೋರೆಯ ಮೇಲಿನ ಮುಗಳ್ನಗೆ ಕಮರಿ ಹೋಯಿತು. ಅವಳ ಮುಖ ಚರ್ಯೆಯ ಮೇಲೆ ಯಾವಾಗಲೂ ಭೀತಿಯು ಕಳೆ ಸುರಿಯುತ್ತಿತ್ತು. ಅಗತ್ಯದ ಕೆಲಸದ ಹೊರತು ಗಂಡ ಹೆಂಡಿರ ಪರಸ್ಪರ ಮಾತು ಕತೆಗಳು ನಿಂತು ಹೋದುವು. ಮೊದಲಿನ ನಗುವದು ನಲಿಯುವದು ಎಲ್ಲವೂ ಮಾಯವಾದವು. ಶೆರೆಯ ಗುಂಗು ಇಳಿದ ಕೂಡಲೆ

ಭರಮಪ್ಪನು ಒಬ್ಬ ಆರೋಪಿಯಂತೆ ಮುಖ ಮಾಡಿಕೊಂಡು ಸ್ತಬ್ಧನಾಗಿ ಕೂಡುತ್ತಿದ್ದ. ಕೋಪದಿಂದ ಉರಿದು, ಹಾಯ್ಹಾಡುವ ಚಿನ್ನವ್ವನ ಕಡೆಗೆ ನೋಡಿ ಆತ ಒಮ್ಮೊಮ್ಮೆ ತನ್ನ ವಿಕಟ ಹಾಗೂ ಕ್ರೂರವಾದ ನಗೆಯನ್ನೂ ಬೀರುತ್ತಿದ್ದ.

ಇಂಥ ಪ್ರಕ್ಷುಬ್ಧ ಮನಸ್ಥಿತಿಯಲ್ಲಿ ಚಿನ್ನವ್ವನ ಮನಸ್ಸು ಸಂಸಾರದಿಂದ ದೂರಾಗತೊಡಗಿತು. ನನ್ನ ಮೇಲಿನ ಆಕೆಯ ಪ್ರೀತಿಯು ಎಳ್ಳಷ್ಟೂ ಕಡಿಮೆ ಯಾಗದಿದ್ದರೂ ನನ್ನ ಸ್ವಚ್ಛತೆಯ ಬಗ್ಗೆ ಆಕೆ ಮೊದಲಿನಷ್ಟು ಕಾಳಜಿ ತೆಗೆದು ಕೊಳ್ಳುತ್ತಿರಲಿಲ್ಲ. ನಾನು ಮಸುಕಾಗನಾಗತೊಡಗಿದೆ. ಒಂದು ರಾತ್ರಿ ಭರಮ ಪ್ಪನ ಬಿರ್ಕ ತಲೆಯಿಂದ ಮನೆಗೆ ಬಂದ. ಪರಸ್ಪರರ ಪ್ರೀತಿಯ ಕುರುಹಾದ ಆತನ ಜರದಂಚಿನ ರುಮಾಲು ತಲೆಯ ಮೇಲಿರಲಿಲ್ಲ. ಚಿನ್ನವ್ವನಿಗೆ ಅದು ಒಮ್ಮೆಲೆ ಹೊಳೆಯಿತು. ಕೂಡಲೆ ಆ ರುಮಾಲಿನ ಬಗ್ಗೆ ಆಕೆ ವಿಚಾರಿಸಿದಳು. ಆದರೆ ಭರಮಪ್ಪ ಮಾತ್ರ ಅದಕ್ಕೆ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಬೆಳಕು ಹರಿಯುತ್ತಲೆ ಅಮಲಿಳಿದ ಭರಮಪ್ಪ ಹೆಂಡತಿಯ ಕಣ್ಣು ತಪ್ಪಿಸಿ ತನ್ನ ಕೆಲಸಕ್ಕೆ ಹೋದ.

ಮುಂದೆ ಏಳೆಂಟು ದಿನಗಳು ಶಾಂತವಾಗಿ ಉರುಳಿದವು ಎನ್ನುವಷ್ಟ ರಲ್ಲಿ ಒಂದು ದುರ್ಘಟನೆ ಸಂಭವಿಸಿತು. ಭರಮಪ್ಪನಿಗೆ ಶೆರೆಯ ತಲಬಾಗಿ ದ್ದರೂ ಆತನ ಹತ್ತಿರ ಒಂದ ಒಡಕ ಕವಡಿ ಸಹ ಇರಲಿಲ್ಲ. ಮಧ್ಯಾಹ್ನದ ಸುಮಾರು ಮೂರು ಘಂಟೆಯ ವೇಳೆಯಾಗಿರಬಹುದು. ಚಿನ್ನವ್ವನು ಕೂಲಿ ಮಾಡಿ ಬಂದು ದಣಿವಿನಿಂದ ಹಾಯಾಗಿ ಬಿದ್ದುಕೊಂಡಿದ್ದಳು. ಆಕೆ ಮಲಗಿದ್ದುದನ್ನು ಕಂಡು ಭರಮಪ್ಪ ಕಳ್ಳಹೆಜ್ಜೆಯಿಂದ ಅಡಿಗೆಯ ಮನೆಯಲ್ಲಿ ಪ್ರವೇಶ ಮಾಡಿದ. ಅತ್ತಿತ್ತ ನೋಡುತ್ತ ನಡುಗುತ್ತಿರುವ ತನ್ನ ಕೈಗಳಿಂದ ನನ್ನನ್ನು ಹಗುರಾಗಿ ಎತ್ತಿಕೊಂಡು ಹೊರಗೆ ಬಂದ. ಭರಮಪ್ಪನ ಚಲನವಲನ ಗಳನ್ನು ನೋಡಿದ ಕೂಡಲೆ ನನಗೆ ಏನೋ ದುರ್ಧರ ಪ್ರಸಂಗ ಬಂದೇ ತೀರು ವದೆಂದು ಸಂಶಯ ಬಂದಿತು. ಭರಮಪ್ಪನು ತನ್ನ ಕರಾಳ ಹಸ್ತದಿಂದ ನನ್ನನ್ನು ಎತ್ತಿದ ಕೂಡಲೆ ನಾನು ಚಿನ್ನವ್ವನನ್ನು ಕರೆದೆ. ಆದರೆ ನಿರ್ಜೀವಿ ಯಾದ ನನ್ನ ಕೂಗು ಚಿನ್ನವ್ವನಿಗೆ ಕೇಳಿಸಿತೋ ಇಲ್ಲೋ ನನಗೆ ಗೊತ್ತಿಲ್ಲ. ಚಿನ್ನವ್ವನು ಮಾತ್ರ ಭರಮಪ್ಪನು ಅಡಿಗೆ ಮನೆಯೊಳಗಿಂದ ಪಾರಾಗುವದ ರೊಳಗಾಗಿಯೆ ಎಚ್ಚರಾದಳು.

ಭರಮಪ್ಪನ ಸ್ವರೂಪ ನೋಡಿದ ಕೂಡಲೆ ಆಕೆಗೆ ಅವನ ಉದ್ವೇಶ ಹೊಳೆಯಿತು. ಕೂಡಲೆ ಆಕೆ ಸಿಂಹಿಣಿಯಂತೆ ಅವನ ಮೇಲೆ ಹಾರಿ ನನ್ನನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಗಂಡ ಹೆಂಡತಿಯರ ಬಡಿದಾಟಕ್ಕೆ ಪ್ರಾರಂಭ ವಾಯಿತು. ಇವರಿಬ್ಬರ ಗುದ್ದಾಟದಲ್ಲಿ ನನ್ನೊಳಗಿನ ಅರ್ಧಕ್ಕಿಂತ ಹೆಚ್ಚು ನೀರು ಚೆಲ್ಲಿ ಹೋಯಿತು. ಭರಮಪ್ಪನು ಗಂಡುಸಾಗಿದ್ದರೂ ಸಹ ನನ್ನ ಮೇಲಿನ ಮಮತೆಯ ಬಲದಿಂದ, ಚಿನ್ನವ್ವನ ಬಲವು ದ್ವಿಗುಣಿತವಾಗಿ, ಅವನ ಕೈಯೊಳಗಿಂದ ಆಕೆ ನನ್ನನ್ನು ಕಸಿದುಕೊಂಡಳು. ಆದರೆ ಅಷ್ಟರಲ್ಲಿ ಆಕೆಯ ಕೈ ಜಾರಿ ನಾನು ಕೆಳಗೆ ಅಪ್ಪಳಿಸಿಕೊಂಡು ಬಿದ್ದು ಉರುಳಿಬಿಟ್ಟೆ. ಬಿದ್ದ ಹೊಡೆತದಿಂದ ನನಗೆ ಅನೇಕ ಕಡೆಗೆ ತಗ್ಗುಗಳು ಬಿದ್ದವು. ನನ್ನ ಸ್ಥಿತಿಯು ಹೀಗಾದ್ದನ್ನು ಕಂಡ ಕೂಡಲೆ ಚಿನ್ನವ್ವನು ತನ್ನ ಹಣೆಯನ್ನು ಗೋಡೆಗೆ ಬಡಿದು ಕೊಳ್ಳಹತ್ತಿದಳು. ಇದನ್ನು ನೋಡಿ ನಮ್ಮಿಬ್ಬರನ್ನು ಬಿಟ್ಟು ಭರಮಪ್ಪನು ಓಡಿ ಹೋದ. ಶೆರೆಯ ಸಲುವಾಗಿ ಆತನ ರುಮಾಲು ಒತ್ತಿ ಬಿದ್ದಿದ್ದರೂ ಚಿನ್ನವ್ವನ ಕೃಪೆಯಿಂದ ನಾನು ಮಾತ್ರ ಆ ದಿನ ಉಳಿದುಕೊಂಡೆ.

ಅತ್ತು ಅತ್ತು ದಣಿದ ಮೇಲೆ ಭಾರವಾದ ಅಂತಃಕರುಣದಿಂದ ಚಿನ್ನ ವ್ವನು ನನ್ನನ್ನು ಎತ್ತಿ ಒಳಗೆ ಒಯ್ದಿಟ್ಟಳು. ಮುಂದೆ ಎರಡು ದಿವಸಗಳಾದರೂ ಭರಮಪ್ಪನ ಸುದ್ದಿಯೇ ಇಲ್ಲ. ಮೂರನೆ ದಿನ ಪೋಲೀಸರ ಕಾವಲಿನೊಂದಿಗೆ ಭರಮಪ್ಪನು ಮನೆಗೆ ಬಂದ; ಶೆರೆ ಕುಡಿದು ಗೊಂದಲ ಮಾಡಿದ್ದಕ್ಕಾಗಿ ಅವನಿಗೆ ಐದು ರೂಪಾಯಿ ದಂಡವಾಗಿತ್ತು. ಅದರ ಸಲುವಾಗಿ ಪೋಲೀಸರು ಜಪ್ತಿ ಮಾಡಿ ನನ್ನನ್ನು ಇಲ್ಲಿಗೆ ತಂದರು. ಒಯ್ಯುವಾಗ ಚಿನ್ನವ್ವನು ಹಾಡಿ ಹಾಡಿ ಹೊರಳಾಡಿ ಅತ್ತಳು. ಇದು ಇನ್ನೂ ನನ್ನ ಕಣ್ಣಮುಂದೆ ಕಟ್ಟಿದೆ. ಅದೆಲ್ಲವನ್ನು ನೆನೆದರೆ ಮೈ ಜುಮ್ಮ ಅನ್ನುತ್ತದೆ. ನಾನು ಬಡವರ ಮನೆಯ ಲ್ಲಿರುತ್ತಿದ್ದರೂ ಅತ್ಯಂತ ಸುಖದಿಂದ ಇರುತ್ತಿದ್ದೆ. ಈ ಸುಡಗಾಡು ಶೆರೆ ನನ್ನನ್ನು ಈ ಅವಸ್ಥೆಗೀಡು ಮಾಡಿತು. ಕಳೆದ ಸುಖದದಿನಗಳನ್ನುಪುನಃ ಈ ಜನ್ಮದಲ್ಲಿ ಕಾಣಬಹುದೇ ?

## ಉಳಿದ ಕೊಡಗಳ ಕಥೆ

ತನ್ನ ಕಥೆಯನ್ನು ಮುಗಿಸಿ ಮೊದಲನೆಯ ಕೊಡವು ಸುಮ್ಮನೆ ಕುಳಿ ತಿತು. ಆ ಮೇಲೆ ಎರಡು ಕೊಡಗಳು ತಮ್ಮ ಕಥೆಯನ್ನು ಪ್ರಾರಂಭಿಸಿದವು.

ಅದೇನು ಅಷ್ಟು ಮನೋವೇಧಕವಿಲ್ಲದ್ದರಿಂದ ಸಂಪೂರ್ಣವಾಗಿ ನನ್ನ ಸ್ಮರಣೆಯಲ್ಲಿ ಉಳಿದಿಲ್ಲ. ಆವೆರಡು ಕೊಡಗಳೂ ಒಂದೇ ಮನೆಯಿಂದ ಬಂದಿದ್ದವು. ಅವು ಬಂದ ಮನೆತನವು ಒಂದು ಹಳ್ಳಿಯಲ್ಲಿ ಎಂಟೆತ್ತಿನ ಕಮತ ಮಾಡುತ್ತಿತ್ತು. ಆ ಮನೆಗೆ ಬಹು ನೀರು ಬೇಕಾಗುತ್ತಿದ್ದುದರಿಂದ ಎತ್ತಿನ ಮೇಲೆ ಲಗಳಿ ಹಾಕಿ ನಾಲ್ಕು ನಾಲ್ಕು ಕೊಡ ಒಮ್ಮೆಲೆ ತರುತ್ತಿದ್ದರು. ಈ ಎರಡೂ ಕೊಡಗಳು ಆ ಲಗಳಿ ಒಳಗಿನವಿದ್ದವು. ನೀರು ತರುವ ಆಳು ಉಸುರಿನಿಂದ ಕೊಡಗಳನ್ನು ಮೇಲಿಂದ ಮೇಲೆ ತಿಕ್ಕುತ್ತಿರಬೇಕೆಂಬುದರ ಕಲ್ಪನೆ ಕೂಡ ಇರುತ್ತಿರಲಿಲ್ಲ. ಲಗಳಿ ಎತ್ತು ಒಮ್ಮೊಮ್ಮೆ ಹೊಸದೂ ಅಥವಾ ಉದ್ದಟವೂ ಇದ್ದಾಗ ಸಬರದ ಮೇಲಿನ ಕೊಡಗಳನ್ನು ಕೆಳಗೆ ಅಪ್ಪಳಿಸುತ್ತಿದ್ದವು. ಅದರಿಂದ ಈ ಕೊಡಗಳು ನೆಗ್ಗಿ ಅಷ್ಟು ಮುಖಗಳೇ ಆಗಿಬಿಟ್ಟವೆ. ಆದರೂ ಒಂದು ದೊಡ್ಡ ಮನೆತನದಲ್ಲಿ ಕೆಲಸ ಮಾಡಿದ ಕೀರ್ತಿಯು ಈ ಕೊಡಗಳಿಗಿದ್ದವು. ಒಮ್ಮೆ ಆ ಮನೆಯಲ್ಲಿ ಲಮಾಣಿ ಜನರಿಂದ ಎಷ್ಟೋ ಸಾಮಾನುಗಳು ಕಳವಾಗಿ ಹೋದವು. ನಂತರ ಪೋಲೀಸ ತಪಾಸಣೆಯಲ್ಲಿ ಈ ಎರಡೂ ಕೊಡಗಳು ಮಾತ್ರ ಸಿಕ್ಕಿದವು ಅವನ್ನೇ ಈಗ ಈ ಕಚೇರಿಯ ಕೋಣೆಯಲ್ಲಿ ತಂದಿಟ್ಟಿದ್ದರು.

## ೪ ನೆಯ ಕೊಡದ ಕಥೆ

ಇದು ಸ್ವಲ್ಪ ಮನೋರಂಜಕವಿತ್ತು. "ನನ್ನ ತುದಿಗಿದ್ದ ಕಲಾಕೃತಿಯಿಂದ ಹಾಗೂ ನನ್ನ ಆಕಾರದಿಂದಲೇ ನಾನು ದೇವರ ಪೂಜೆಗಾಗಿ ಕೆಲಸ ಮಾಡುತ್ತಿದ್ದೆನೆಂಬುದು ನಿಮಗೆ ಗೊತ್ತಿರಬಹುದು. ದೇವರಆರಾಧನೆಯಿಂದಲೇ ತನಗೆ ಬಹಳ ದಿನಗಳ ಮೇಲೆ ಗಂಡಸುಮಗ ಹುಟ್ಟಿದ್ದರಿಂದ ಒಬ್ಬ ಶ್ರೀಮಂತ ಗೃಹಸ್ಥನ ಹೆಂಡತಿಯು ನನ್ನನ್ನು ಮುದ್ದಾಂ ಕೊಂಡು ಆ ದೇವರ ಗುಡಿಗೆ ದಾನ ಕೊಟ್ಟಿದ್ದಳು. ನನ್ನನ್ನು ಕಂಡು ಆಗುಡಿಯ ಪೂಜಾರಿಗೂ ಅತ್ಯಂತ ಸಂತೋಷವಾಯಿತು. ಅಗ್ರೋದಕನನ್ನು ನನ್ನಲ್ಲಿಯೇ ತುಂಬುತ್ತಿದ್ದ. ಸತ್ಕಾರ್ಯಕ್ಕಾಗಿ ನನ್ನ ಉಪಯೋಗವಾಗುತ್ತಿರುವದನ್ನು ನೋಡಿ ನನಗೂ ಬಹಳ ಸಮಾಧಾನವಾಗಿತ್ತು. ಹೀಗೆ ಕೆಲವು ಮಾಸಗಳು ಕಳೆದು ಹೋಗಲಾಗಿ ಒಂದು ದಿನ ಆ ಪೂಜಾರಿಯು ನೀರು ತರಬೇಕೆಂದು ನನ್ನನ್ನು

ನದಿಗೆ ಒಯ್ದಾಗ ಅವನ ಪರಿಚಿತಳಾದ ಒಬ್ಬ ಸ್ತ್ರೀಯು ನನ್ನನ್ನು ಬಹಳ ಹೊಗಳಿದಳು. ಆಕೆಯ ಸ್ತುತಿಯನ್ನು ಕೇಳಿ ನನಗೆ ಸಂತೋಷವಾಗದೆ ಹೆದರಿಕೆ ಉಂಟಾಯಿತು. ನಾನು ಗುಡಿಗೆ ಬಂದ ಮುಂದೆ ೩-೪ ದಿನಗಳ ಮೇಲೆ ಮಧ್ಯಾಹ್ನ ೩-೪ ಘಂಟೆಯ ಸುಮಾರಕ್ಕೆ ಗುಡಿಯೊಳಗೆ ಬಂದು ಆ ಪೂಜಾರಿಯು ನನ್ನನ್ನು ಹಿಡಿದುಕೊಂಡು ಹೊರಟ. ಇಂಥ ಅಪ್ಪವೇಳೆಯಲ್ಲಿ ನನ್ನನ್ನು ಎಲ್ಲಿಗೆ ಒಯ್ಯುತ್ತಿರಬಹುದೆಂಬುದು ನನಗೆ ಹೊಳೆಯಲಿಲ್ಲ. ನನ್ನನ್ನು ಹಿಡಿದುಕೊಂಡು ಗುಡಿಯ ಹೊಸ್ತಿಲಿನ ವರೆಗೆ ಹೋಗಿ, ಆತ ಪುನಃ ತಿರುಗಿ ಬಂದು ನನ್ನ ಸ್ಥಳದಲ್ಲಿ ನನ್ನನ್ನಿಳಿಸಿದ. ನನ್ನನ್ನು ಎತ್ತಿಕೊಂಡು ಎಲ್ಲಿಗೋ ಹೋಗುವ ಬಗ್ಗೆ ಅವನ ಮನಸ್ಸು ಇನ್ನೂ ಹೊಯ್ದಾಡುತ್ತಿದ್ದಂತೆ ತೋರಿತು. ಮೂರು ದಿನಗಳ ವರೆಗೂ ಅವನು ಹೀಗೆ ಮಾಡಹತ್ತಿದ. ನನ್ನನ್ನು ಹೊರಗೆ ಒಯ್ಯುವಷ್ಟು ಅವನ ಮನಸ್ಸಿನ ಧೈರ್ಯವಾಗಿದ್ದಿಲ್ಲವೆಂದು ತೋರುತ್ತಿದೆ. ಆದರೆ ನಾಲ್ಕನೇ ದಿನ ಅದೇ ಹೊತ್ತಿಗೆ ಪೂಜಾರಿಯು ಗುಡಿಯೊಳಗೆ ಬಂದಕೂಡಲೇ ಈ ದಿನ ಈತನು ತನ್ನ ಮನಸ್ಸಿನಲ್ಲಿದ್ದುದನ್ನು ಮಾಡಿಯೇ ತೀರುವನೆಂದು ನನಗೆ ಗೊತ್ತಾಯಿತು. ನನ್ನನ್ನು ಎತ್ತಿಕೊಂಡವನೇ ತನ್ನ ಮನೆಯ ದಾರಿ ಹಿಡಿದು ಬಿಟ್ಟ. ಅವನ ಮನೆಯಲ್ಲಿ ಎಲ್ಲರೂ ದೇವರ ಕೊಡವನ್ನು ಮನೆಗೆ ಹೇಗೆ ತಂದಿರಿ " ಎಂದು ಕೇಳಹತ್ತಿದರು. ಅಸರ ಮುಂದೆ ಕೊಡಕ್ಕೆ ಹೆಸರು ಹಾಕಿಸುವದಿದೆ ಎಂದು ಗುಳಿಗೆ ಹೊಡೆದ ಆ ಪೂಜಾರಿ.

ಅದೇ ದಿನ ರಾತ್ರಿ ೧೧ ಘಂಟೆ ಸುಮಾರಕ್ಕೆ ಆ ಪೂಜಾರಿಯು ನನ್ನನ್ನು ಒಬ್ಬ ಹೆಂಗಸಿನ ವಶಕ್ಕೆ ಒಪ್ಪಿಸಿ ಬಿಟ್ಟ. ಆ ದಿನ ನದಿಯ ಮೇಲೆ ನನ್ನನ್ನು ಮಿತಿಮೀರಿ ಹೊಗಳಿದ ಹೆಂಗಸೇ ಅವಳಿದ್ದಳು. ಪೂಜಾರಿಯು ಅವಳನ್ನು ಪೂಜಿಸುತ್ತಿದ್ದ. ಆದರೆ ಅವಳ ಮನೆಯಲ್ಲಿ ನನಗೆ ಬಹಳ ದಿನಗಳಿರಬೇಕಾಗಲಿಲ್ಲ. ಕೆಲವು ದಿನಗಳ ಮೇಲೆ ಆ ಸ್ತ್ರೀಯು ಕಾಲರಾದಿಂದ ಒಮ್ಮಿಂದೊಮ್ಮೆಲೆ ಇಹಲೋಕವನ್ನು ತ್ಯಜಿಸಿದಳು. ಹತ್ತಿರದವರು ಯಾರೂ ಇರಲಿಲ್ಲ ಪೋಲೀಸರು ಪಂಚನಾಮೆ ಮಾಡಿ ಅಕೆಯ ಆಸ್ತಿಯನ್ನು ನಾಜರರ ವಶಕ್ಕೆ ಕೊಟ್ಟರು. ಆದರಲ್ಲಿ ನಾನೂ ಬಂದೆ. ಇನ್ನು ಮುಂದೆ ನನ್ನ ನಶೀಬದಲ್ಲಿ ಏನು ಇದೆಯೊ ಯಾರು ಬಲ್ಲರು ?

## ೫ನೇ ಕೊಡದ ಕಥೆ

ಈ ಕೊಡವು ಇಲ್ಲಿಯವರೆಗೆ ಸ್ತಬ್ಧವಾಗಿ ಕುಳಿತು ತನ್ನ ಸರದಿ ಬಂದ ಕೂಡಲೆ ಮೊದಲು ಒಂದು ದೀರ್ಘವಾದ ನಿಟ್ಟುಸಿರನ್ನು ಬಿಟ್ಟು ಹೀಗೆ ಹೇಳಿತು. "ನಾನು ಸುದೈವದಿಂದ ಒಂದು ದೊಡ್ಡ ಮನೆತನವನ್ನು ಸೇರಿಕೊಂಡು ಸುಖವಾಗಿದ್ದೆ. ಕನಿಷ್ಠ ೩೦-೪೦ ಜನರಾದರೂ ಅಲ್ಲಿರುತ್ತಿದ್ದರು. ಅವರೆಲ್ಲರೂ ಯಾವಾಗಲೂ ಒಂದಿಲ್ಲೊಂದು ಕೆಲಸದಲ್ಲಿ ತತ್ಪರರಾಗಿಯೇ ಇರುತ್ತಿದ್ದರು. ಆ ಮನೆಯ ಹಿರಿಯ ಮಗನ ಲಗ್ನವು ಸುಲಕ್ಷಣೆಯಾದ ಒಬ್ಬ ಸುಂದರ ಯುವತಿಯ ಕೂಡ ಜರುಗಿತು. ಸೊಸೆಯು ಅತ್ತೆಯ ಮನೆಗೆ ಬಂದಳು. ಆ ತರುಣ ದಂಪತಿಗಳನ್ನು ನೋಡಿದರೆ ರತಿ ಕಾಮರ ಕಲ್ಪನೆಯು ಯಾರಿಗಾದರೂ ಬರುತ್ತಿತ್ತು. ಅದನ್ನು ನೋಡಿ ವಿಧಿಗೆ ಹೊಟ್ಟೆಕಿಚ್ಚು ಆಗಿರಬೇಕು. ಆ ಹಿರಿಯ ಮಗನ ಮನಸ್ಸಿನಲ್ಲಿ ತನ್ನ ತರುಣ ಸುಂದರ ಹೆಂಡತಿಯ ಶೀಲದ ಬಗ್ಗೆ ಸಂಶಯ ಉತ್ಪನ್ನವಾಯಿತು. ಕೂಡಲೆ ಆಕೆಯನ್ನು ನಾನಾ ವಿಧವಾಗಿ ಪೀಡಿಸಹತ್ತಿದ. ಪಾಪ ಆಕೆಯೇನು ಮಾಡಬೇಕು. ಒಂದು ದಿನ ದೇವರ ಪೂಜೆಗೆ ಮಡಿ ನೀರು ತರುವ ನೆಪ ಮಾಡಿಕೊಂಡು ಹೊರಬಿದ್ದಳು. ಬಾವಿಯ ದಂಡೆಯ ಮೇಲೆ ನನ್ನನ್ನಿಟ್ಟವಳೇ ತಾನು ಒಳಗೆ ಹಾರಿಕೊಂಡಳು. ನೀರೊಳಗೆ ಬೀಳುವ ಮುಂದೆ ಆ ತರುಣ ಜೀವಿಯು ಮಾಡಿದ ಆರ್ತನಾದವು ಇನ್ನೂ ನನ್ನ ಕಿವಿಯಲ್ಲಿ ದನಿಗೊಳ್ಳುತ್ತಿದೆ ಆ ಮೇಲೆ ಪೋಲೀಸರು ಪಂಚನಾಮೆ ಮಾಡಿ ನನ್ನನ್ನು ಇಲ್ಲಿ ತಂದು ಒಗೆದರು. ಈಗಲೂ ಆ ದುರ್ದೈವಿ ತರುಣಿಯ ನೆನಪಾದ ಕೂಡಲೆ ಎದೆಯು ದಸ್ಸನ್ನುತ್ತದೆ.

ಹೀಗೆ ಹೇಳುತ್ತ ನಿಜವಾಗಿಯೂ ಆ ಐದನೆಯ ಕೊಡವು ಅತ್ಯಂತ ಕರ್ಕಶ ಸ್ವರದಿಂದ ಚೀರಿತು. ಅದನ್ನು ಕೇಳುತ್ತಲೆ ನಾನು ಗಡಬಡಿಸಿಕೊಂಡು ಎಚ್ಚತ್ತೆ. ಎದ್ದು ನೋಡುವದರೊಳಗೆ ಆ ಕೊಡಗಳು ತಮ್ಮ ತಮ್ಮ ಸ್ಥಾನಗಳಲ್ಲಿಯೇ ಇದ್ದುವು. ನನ್ನ ಕೋಣೆಯ ಕಾವಲಗಾರನು ಮಾತ್ರ ವಿಚಿತ್ರ ಸ್ವರದಿಂದ "ಆಲಬೆಲ್" ಕೊಡುತ್ತಿದ್ದ.

೧೭-೧-೧೯೪೫ ಕರ್ಮವೀರ

# ನನ್ನ ಸಾವು



ನಾನು ಸತ್ತಿರುವೆನೆಂದು ಜನರು ಅನ್ನುತ್ತಾರೆ. ದುಃಖ ಪಡುತ್ತಾರೆ. ಕೆಲವರು ದುಃಖಬಡುವವರಿಗೆ ಸಮಾಧಾನದ ಮಾತು ಹೇಳುತ್ತಾರೆ. ಹೀಗಿದ್ದರೂ ನಾನು ಸತ್ತಿಲ್ಲ. ಜೀವದಿಂದಿರುವೆನೆಂದು ನನಗೆ ಅನಿಸುವದು. ಬಹು ಜನರ ಮತವು ನಾನು ನಿಜವಾಗಿ ಮೃತಪಟ್ಟೆನೆಂದು, ಆದರೆ ನನ್ನ ಅನುಭವವು ನಾನು ಮೃತಪಟ್ಟಿಲ್ಲವೆಂದಿರುವದರಿಂದ ಈ ವ್ಯತ್ಯಾಸವು ಹೋಗಿ ಐಕ್ಯಮತ್ಯವಾಗುವ ಬಗೆಯು ತೋರದಂತಾಗಿರುವದು. ನಿಜಸ್ಥಿತಿಯನ್ನು ಹೇಳಿದರೆ ಕೇಳುವರೆಂಬ ಆಶೆಯಿಂದ ನಾಲ್ಕು ಶಬ್ದಗಳನ್ನು ಹೇಳಲುದ್ಯುಕ್ತನಾಗಿರುವೆನು.

ಸ್ವಲ್ಪ ಥಂಡಿಯಾಗಿ ಜ್ವರ ಬಂದವೆಂದು ಮನೆಯಲ್ಲಿ ಮಲಗಿಕೊಂಡೆನು ಜ್ವರವು ಆರಲಿಲ್ಲ. ಉಪಚಾರಗಳು ಹೆಚ್ಚು ಹೆಚ್ಚು ಆದಂತೆ ಬೇನೆಯು ಬೆಳೆಯುತ್ತ ನಡೆಯಿತು. ಮೈಯಲ್ಲಿ ಜ್ವರವಿದ್ದಾಗ ಗಾಳಿ ತಾಗಿದ್ದರಿಂದ ಕಫ ಉಂಟಾಯಿತು. ವೈದ್ಯರು ಚಿಂತಾಕ್ರಾಂತರಾದರು. ವಿಲಾಯತಿಯ ಔಷಧಗಳಿಂದ ಏನೂ ಗುಣಬಾರದ್ದರಿಂದ ಆಯುರ್ವೇದದ ಪಂಡಿತರ ಕಡೆಗೆ ಅಪ್ತೇಷ್ಟರು ಎಡತಾಕಹತ್ತಿದರು. ನನ್ನ ಬೇನೆಯ ಬಗ್ಗೆ ಮಾತಾಡುವದಾದರೆ ಖೋಲಿಯಿಂದ ಹೊರಗೆ ಹೋಗಿ ಸದ್ದು ಮಾಡದೇ ಮಾತಾಡ ಹತ್ತಿದರು. ಜ್ವರದಿಂದಾಗುವ ವಿಕಾರಗಳು ನನ್ನ ಬೆನ್ನು ಬಿಡಲಿಲ್ಲ. ಹಸ್ತಪಾದಗಳಿಗೆ ಪಂಜು ಹಚ್ಚಿದಂತೆ ಅಥವಾ ಕಣ್ಣ ಮುಂದೆ ಸಾವಿರಾರು ವಿದ್ಯುದ್ದೀಪಗಳನ್ನು ಒಮ್ಮೆಲೆ ಬೆಳಗಿದಂತೆ ಅನಿಸಹತ್ತಿತು. ಒಮ್ಮೊಮ್ಮೆ ನಾನು ಮಲಗಿದಲ್ಲಿಯೇ ನನ್ನ ಮೇಲೆ ಅರಳಿಯ ದಿಂಬುಗಳನ್ನಿಟ್ಟಂತೆ ಅನಿಸುವದು. ಕಾರಣವಿಲ್ಲದೆ ನನ್ನ ಮೇಲೆ ದಿಂಬುಗಳನ್ನು ಯಾರು ಇಡುವರು. ಇದು ನನಗೆ ತಿಳಿಯುತ್ತಿದ್ದಿಲ್ಲ. ಅಥವಾ ದಿಂಬುಗಳನ್ನು ಇಡಬೇಡಿರೆಂದು ಹೇಳುವ ಬುದ್ಧಿಯಾದರೂ ತೋಚುತ್ತಿದ್ದಿಲ್ಲ. ದಿಂಬುಗಳ ಭಾರವು ಅಸಹ್ಯವಾದಕೂಡಲೆ ನಾನು ಒದರುತ್ತಿದ್ದೆನು. ಆರೈಕೆಗಾಗಿ ನನ್ನ ಹತ್ತರಕೂತ ಜನರು ನನ್ನನ್ನು ಎಚ್ಚರಿಸಿದ

ಮೇಲೆ ಚೀರಾಟವು ನಿಲ್ಲುತ್ತಿತ್ತು. ಸ್ವಲ್ಪ ಸಮಯದಲ್ಲಿಯೇ ಮತ್ತೆ ಸ್ಮೃತಿ ತಪ್ಪಿ ಬೇರೊಂದು ತರದ ಮಾಯಾ ತರಂಗವು ಮನಸ್ಸಿನಲ್ಲಿ ಹುಟ್ಟುತ್ತಿತ್ತು. ಮಂಚದ ಮೇಲೆ ಬಿದ್ದ ದೇಹವು ತನ್ನಿಂದ ತಾನೆ ಎದ್ದು ಅಂತರಾಳದಲ್ಲಿ ಸಂಚರಿಸಿದಂತೆ ಅನಿಸುವದು. ಸಂಚರಿಸುತ್ತ ಗಿಮಿ ಗಿಮಿ ತಿರುಗುತ್ತ ಅದು ಮೇಲೆ ಹೋದಂತೆ ನನಗೆ ಒಂದು ಬಗೆಯು ಆನಂದವಾಗುತ್ತಿತ್ತು. ಆದರೆ ಅತ್ಯುಚ್ಚ ಸ್ಥಾನಕ್ಕೆ ಮುಟ್ಟಿದ ಕೂಡಲೆ ಒಮ್ಮೆಲೆ ದೇಹದಲ್ಲಿಯ ಹಾರಾಡುವ ಶಕ್ತಿಯು ನಷ್ಟವಾಗಿ ಅದು ಭೂತಲಕ್ಕೆ ಅಪ್ಪಳಿಸುವಂತೆ ಅನಿಸಿ ಭೂಮಿಯ ಮೇಲೆ ಬಿದ್ದರೆ ಛಿನ್ನವಿಛಿನ್ನವಾಗುವೆನೆಂದು ಅಂಜಿ ನಾನು ಚೀರುತ್ತಿದ್ದೆನು. ಜನರು ಎಚ್ಚರಿಸಿ ಹೇಳಿದ ಮೇಲೆ, ನಾನು ಹಾಸಿಗೆಯ ಮೇಲೆ ಇರುವೆನೆಂದು ಸಮಾಧಾನ ಪಡುತ್ತಿದ್ದೆನು.

ಹೀಗೆ ಮೂರು ದಿನಗಳು ಹೋದವು. ಆ ಮೇಲೆ ಎದೆಯಲ್ಲಿ ಕಫ ಕೂಡಿ ಶ್ವಾಸೋಚ್ಛ್ವಾಸಕ್ಕೆ ತೊಂದರೆಯಾಗಹತ್ತಿತು. ಈ ಸ್ಥಿತಿಯಲ್ಲಿ ನಾನು ಬೇಶುದ್ಧನಾಗಿ ಇರುವದು ಹೆಚ್ಚಾಯಿತು. ವೇದನೆಗಳು ಉತ್ಕಟವಾದವು. ಶುದ್ಧಿಯಲ್ಲಿದ್ದಾಗ ವೇದನೆಗಳ ತಾಪಕ್ಕಿಂತ ಮರಣವು ಒಳಿತೆಂದೆನಿಸುವದು. ಈ ದೇಶೆಯಲ್ಲಿ ಬಹಳ ಹೊತ್ತು ಇರಬೇಕಾಗಲಿಲ್ಲ. ಒಮ್ಮೆಲೆ ಎಲ್ಲ ವೇದನೆಗಳು ನಿಂತಂತಾಯಿತು. ದೇಹದ ಮೇಲೆ ಈ ವರೆಗೂ ಇಟ್ಟಂಥ ಒಂದು ದೊಡ್ಡ ಭಾರವು ಹಗುರಾದಂತೆ ಆಯಿತು, ನನಗೆ ತಿಳಿಯಲಿಲ್ಲ. ನನ್ನ ಹತ್ತಿರ ಜನರು ಮಾತನಾಡುವರು (?) ಮುಂತಾದ ಕೃತಿಗಳು ನನಗೆ ಸ್ಪಷ್ಟವಾಗಿ ತಿಳಿಯಹತ್ತಿದವು. ಒಬ್ಬ ಮನುಷ್ಯನು ನನ್ನ ಕಾಲುಗಳನ್ನು ತಿಕ್ಕುತ್ತ ಅವುಗಳಲ್ಲಿ ಉಷ್ಣತೆ ಉಂಟುಮಾಡಲು ಯತ್ನಿಸುತ್ತಿದ್ದನು. ಮತ್ತೊಬ್ಬನು ಲವಂಗ ತೇದು ನನ್ನ ಕಣ್ಣಿಗೆ ಹಚ್ಚುತ್ತಿದ್ದನು. ನನ್ನ ತಂಗಿ ನನ್ನ ಕಿವಿಗೆ ಬಾಯಿ ಹಚ್ಚಿ ಜೋರಿನಿಂದ ನನ್ನ ಹೆಸರುಗೊಂಡು ಚೀರುತ್ತಿದ್ದಳು. ಇಷ್ಟೆಲ್ಲ ಉಪಚಾರಗಳನ್ನು ಅನುಭವಿಸುತ್ತಿದ್ದರೂ, ಈ ಉಪಚಾರಗಳ ಪ್ರಯೋಜನ ಮಾತ್ರ ನನಗೆ ತಿಳಿಯಲೊಲ್ಲದು. ಒಂದೆರಡು ನಿಮಿಷದಲ್ಲಿ ನನ್ನ ವೇದನೆಗಳಿಗೆ ಮತ್ತೆ ಪ್ರಾರಂಭವಾಯಿತು. ಪುನಃ ನಾನು ನರಳಹತ್ತಿದ್ದನ್ನು ನೋಡಿ ಎಲ್ಲರೂ ಆನಂದೋದ್ಗಾರಗಳನ್ನು ತೆಗೆದರು. ಸ್ವಲ್ಪ ಸ್ಮೃತಿ ಬಂದ ಮೇಲೆ ನನ್ನ ಜೀವವು ಹೋಗಿದ್ದು ತಿರುಗಿತೆಂದು ಯಾರೋ ಹೇಳಿದರು. ಜೀವ ಹೋಗಿ

ತಿರಗುವ ಈ ಚಮತ್ಕಾರವು ಒಮ್ಮೆ ಆಗಿ ನಿಲ್ಲಲಿಲ್ಲ. ಆ ದಿವಸ ಮತ್ತೆ ಎರಡು ಸಾರೆ ಮೇಲಿನಂತೆ ಆಯಿತು.

ಮರುದಿನ ಬೆಳಗಿನ ಜಾವದಲ್ಲಿ ನಮ್ಮ ಮನೆಯಲ್ಲಿ ಬಹಳ ಜನರು ಬಂದಂತೆ ಅನಿಸಿತು. ಶ್ವಾಸೋಚ್ಛ್ವಾಸದ ತೊಂದರೆಯಿಂದ ನನ್ನ ವೇದನೆಗಳು ಹೆಚ್ಚಿದ್ದರಿಂದ ಇಷ್ಟು ಜನರು ಬಂದ ಕಾರಣವು ನನಗೆ ತಿಳಿಯಲಿಲ್ಲ. ಮತ್ತೊಮ್ಮೆ ನನ್ನ ಎಲ್ಲ ವೇದನೆಗಳೂ ನಿಂತಂತಾಯಿತು ಆದರೆ ಮೇಲೆ ಹೇಳಿದಂತೆ ವೇದನೆಗಳು ತಿರುಗಲಿಲ್ಲ ಈ ರೀತಿಯಿಂದ ಮುಕ್ತನಾದ ನಾನು ಮನೆಯಲ್ಲಿ ಅಡ್ಡಾಡ ಹತ್ತಿದೆ. ಆದರೆ ನನಗೆ ತಿಳಿಯದಂಥ ಒಂದು ಚಮತ್ಕಾರವನ್ನು ಮಾತ್ರ ನಾನು ಕಂಡೆನು. ನನ್ನಂಥ ಆಕಾರವುಳ್ಳ ದೇಹದ ಸುತ್ತಲೂ ಕುಳಿತು ನನ್ನ ಆಪ್ತೇಷ್ಟರು ಎದೆ ಎದೆ ಬಡಿದುಕೊಂಡು ಅಳುತ್ತಿದ್ದರು. ಯಾಕೆ ಅಳುತ್ತಿರುವರೋ ತಿಳಿಯಲೊಲ್ಲದು. ಅವರ ಶಬ್ದಗಳನ್ನು ಕೇಳಿದ ಮೇಲೆ ನಾನು ಸತ್ತನೆಂದು ಅಳುತ್ತಿರುವದಾಗಿ ಗೊತ್ತಾಯಿತು. ನಾನು ಇದ್ದಾಗ್ಯೂ ಸತ್ತನೆಂದು ಭಾವಿಸುವದನ್ನು ನೋಡಿ ಆಶ್ಚರ್ಯವಾಯಿತು. “ನಾನು ಸತ್ತಿಲ್ಲ ಅಳಬೇಡಿ” ಎಂದರೆ ಕೇಳಿಸುವಂತೆ ತೋರಲಿಲ್ಲ. ಅವರ ಆಕ್ರೋಶವು ಜೋರಿನಿಂದ ನಡೆಯಿತು ನನ್ನ ಶಬ್ದವು ಏಕೆ ಕೇಳಿಸಬಾರದು ? ಇದೂ ನನಗೆ ತಿಳಿಯಲಿಲ್ಲ. ಈ ಸಂದರ್ಭದಲ್ಲಿ ಮತ್ತೊಂದು ಆಶ್ಚರ್ಯದ ಸಂಗತಿಯು ಇತ್ತು. ನನ್ನಂತೆ ಕಾಣಿಸುವ ದೇಹವು ನನ್ನ ಬಳಗದವರ ಮಧ್ಯದಲ್ಲಿ ಬಿದ್ದಿದ್ದರೂ ಆ ದೇಹವೆಂದರೆ ನಾನಲ್ಲ ಅದು ನನ್ನಂತೆ ಕಾಣಿಸುತ್ತಿರಬಹುದೆಂದು ನನಗೆ ಭಾವನೆಯಾಯಿತು. ನನ್ನ ಬಾಲ್ಯದಲ್ಲಿಯ ಛಾಯಾಚಿತ್ರವನ್ನು ನೋಡಿ, ಒಬ್ಬ ಮಧ್ಯ ವಯಸ್ಕನಾದ ಮನುಷ್ಯನಿಗೆ ಏನೇನಿಸುವದೋ ಅದೇ ಭಾವನೆಯು ನನಗೆ ಆಯಿತು. ಭೂಮಿಯ ಮೇಲೆ ಬಿದ್ದ ಆ ದೇಹದ ಮೇಲಿನ ಮಹತ್ವವು ಪೂರಾ ಹೋಗದಿದ್ದರೂ ಅದೂ ನಾನೂ ಬೇರೆ, ಒಂದೇ ಅಲ್ಲ. ಅದರ ಅಸ್ತಿತ್ವಕ್ಕೆ ಸಂಬಂಧವಿಲ್ಲೆಂದು ಕಂಡಿತು. ಹೀಗೆ ನಾನು ಎಲ್ಲ ವೇದನೆಗಳಿಂದ ಮುಕ್ತನಾಗಿ ನಾನು ಸತ್ತಿಲ್ಲ ಜೀವದಿಂದ ಸುರಕ್ಷಿತವಾಗಿರುವೆನೆಂದು ಎಷ್ಟು ಹೇಳಿದರೂ ನನ್ನ ಬಾಂಧವರ ಆಕ್ರೋಶ ನಿಲ್ಲಲಿಲ್ಲ. ಒಂದೆರಡು ತಾಸಿನ ನಂತರ ನನ್ನ ಛಾಯಾ ಚಿತ್ರವಾದ ಆ ದೇಹ

ವನ್ನು ಸ್ಮಶಾನಕ್ಕೆ ಒಯ್ದು ಸುಟ್ಟುಬಂದರು. ಆ ಮೇಲೆ ಹತ್ತು ಹದಿನಾರು ದಿವಸದ ವರೆಗೆ ನಮ್ಮ ಮನೆಯಲ್ಲಿ ಗೊಂದಲವೇ ನಡೆಯಿತು. ನಾನು ಸತ್ತೆನೆಂದು ದುಃಖಪಡುವ ನನ್ನ ಕುಟುಂಬದವರ ಸಮಾಧಾನ ಮಾಡುವದಕ್ಕೆ ಊರ ಜನರು ಬರುತ್ತಿದ್ದರು. ಅವರು ಬಾಗಿಲದಲ್ಲಿ ಬಂದ ಕೂಡಲೆ, ನಮ್ಮ ಮನೆಯ ಜನರು ಜೋರಿನಿಂದ ಅಳಲಿಕ್ಕೆ ಪ್ರಾರಂಭ ಮಾಡುತ್ತಿದ್ದರು. ಬಂದವರು ನಾಲ್ಕು ಉಪಚಾರದ ಮಾತುಗಳನ್ನು ಹೇಳಿ, ತಾವೂ ಸ್ವಲ್ಪ ಸ್ವಲ್ಪ ಅತ್ತು ದುಃಖ ಪ್ರದರ್ಶನ ಮಾಡುತ್ತಿದ್ದರು. ಈ ಜನರು ಹುಚ್ಚರಂತೆ ಕಾರಣವಿಲ್ಲದೇ ಅಳುವದನ್ನು ನೋಡಿ, ನನಗೆ ಬೇಸರ ಬಂದಿತು. ಅವರು ಅಳಬಾರದು, ದುಃಖ ಪಡಬಾರದು ಎಂದು ನಾನು ಅವರಿಗೆ ಪರಿ ಪರಿಯಿಂದ ಹೇಳಿದೆನು. ನಾನು ಎದುರಿನಲ್ಲಿ ಕುಳಿತು ಎಷ್ಟು ಚೀರಿದರೂ ನನ್ನ ಶಬ್ದವೇ ಅವರ ಲಕ್ಷಕ್ಕೆ ಬಾರದಂತೆ ಕಂಡಿತು. ಮತ್ತು ನನ್ನ ಶಬ್ದವೇ ಅವರಿಗೆ ಕೇಳಿಸದಂತೆ ಅವರು ವರ್ತಿಸ ಹತ್ತಿದರು. ಮನೆಯಲ್ಲಿ ಈ ಹಾಡಾಯಿತು ನಿತ್ಯವೂ ಹೋಗುವಂತೆ ಖಾದೀ ಭಾಂಡಾರಕ್ಕೆ ಹೋದೆನು. ಕಟ್ಟೆಯ ಮೇಲೆ ಏರಿ ನಿತ್ಯದ ಸ್ಥಳದಲ್ಲಿ ಕುಳಿತೆನು; ಆದರೆ ಭಾಂಡಾರದಲ್ಲಿಯ ವ್ಯವಸ್ಥಾಪಕನು ನನ್ನ ಸಂಗಡ ಮಾತಾಡುವದಂತಿರಲಿ, ನನ್ನ ಕಡೆಗೆ ಅವನು ಕಣ್ಣೆತ್ತಿ ಸಹ ನೋಡಲಿಲ್ಲ ಇಷ್ಟೆ ಅಲ್ಲ, ಯಾರೋ ವ್ಯಾಪಾರಕ್ಕೆ ಬಂದಾಗ್ಗೆ ಅವರ ಸಂಗಡ ಅವನು ಸಹ ನನ್ನ ಮರಣದ ಸುದ್ದಿಯನ್ನೆ ಮಾತಾಡಹತ್ತಿದನು ನನಗೆ ಸಿಟ್ಟು ಬಂದಿತು. ನಾನು ಸತ್ತಿಲ್ಲವೆಂದು ಅವರ ಮನವರಿಕೆಮಾಡಲು ಇಲ್ಲಿ ಆವರೂ ಪ್ರಯತ್ನ ಬಟ್ಟೆನು. ಅದೂ ವ್ಯರ್ಥವಾಯಿತು.

ಅಲ್ಲಿಂದ ವಾಚನಾಲಯಕ್ಕೆ ಹೋದೆನು. ಅಲ್ಲಿ ಪರಿಚಯಸ್ಥರು ಎದುರಿನಲ್ಲಿ ಭೆಟ್ಟಿಯಾದರೂ ಮಾತಾಡಿಸದೇ ಹಾಗೆ ಹೋದರು ಕೆಲ ಹೊತ್ತು ಕಳೆದ ಮೇಲೆ ನಮ್ಮ ನಿತ್ಯದ ಮಿತ್ರ ಸಮಾಜಕ್ಕೆ ಹೋದೆನು. ಅಲ್ಲಿ ನನ್ನ ಮಿತ್ರರು ಇಸಪೇಟ ಆಡುತ್ತಿದ್ದರು. ಕೆಲವರು ಸುಮ್ಮನೆ ಹರಟೆ ಹೊಡೆಯುತ್ತಿದ್ದರು. ಅವರೊಡನೆ ಏನಾದರೂ ಮಾತಾಡಿ ಕಾಲಕಳೆದು ಮನೆಗೆ ಹೋಗಬೇಕೆನ್ನುವಷ್ಟರಲ್ಲಿ ಅವರಾದರೂ ನನ್ನ ಮರಣದ ಸುದ್ದಿಯನ್ನೆ ಮಾತಾಡುವದನ್ನು ಕೇಳಿದೆನು; ಮುಗಿಯಿತು. ಕಡೆಯ ಯತ್ನವೆಂದು ಇವರ ಮುಂದಾದರೂ ನಾನು ಸತ್ತಿಲ್ಲ, ಇರುವೆನೆಂದು ಹೇಳಲಿಕ್ಕೆ ಪ್ರಯತ್ನಿಸಿದೆನು. ಇವರಾದರೂ ನನ್ನ ಶಬ್ದಗಳು ಕೇಳಿಸದಂತೆ ಆಚರಿಸಿದರು. ನಿರಾಶನಾಗಿ ಮನೆಗೆ ಹೋದೆನು.

ನನ್ನ ಮಾತು ಕೇಳುವವರಿಲ್ಲ. ನನಗೆ ಮಾತು ಹೇಳುವವರಿಲ್ಲ. ಇಂಥ ಸ್ಥಿತಿಯಲ್ಲಿ ಕಾಲಹರಣ ಮಾಡಲಿಕ್ಕೆ ಬೇಸರ ಬರಹತ್ತಿತ್ತು. ಹೀಗೆ ಹೀನವಾದ ಆಯುಷ್ಯವನ್ನು ಹೇಗೆ ಕಳೆಯಬೇಕೆಂಬ ವಿವಂಚನೆಯಲ್ಲಿ ಮನಕ್ಕೆ ಬಂದಂತೆ ಅಡ್ಡಾಡುವಾಗ ದಣಿದುಬಂದು ಶಾಂತ ಸ್ಥಳದಲ್ಲಿ ಕುಳಿತೆನು. ಶ್ರಮದಿಂದ ಸ್ವಲ್ಪ ಜಂಪು ಹತ್ತಿತು. ಎಚ್ಚರಾಗಿ ನೋಡುವಷ್ಟರಲ್ಲಿ ನನ್ನ ಎದುರಿನಲ್ಲಿ ನನ್ನ ಗುರುತಿನವರಾರೋ ಕುಳಿತಂತೆ ಕಾಣಿಸಿತು. ಆ ಗೃಹಸ್ಥನ ಮೋರೆಯನ್ನು ನೋಡಿ ಚಕಿತನಾದೆನು. ನಾನು ನಿದ್ರೆಯಲ್ಲಿ ಇರುವೆನೋ ಎಚ್ಚರಾಗಿರುವೆನೋ ಎಂಬ ಶಂಕೆ ಬಂದಿತು. ಏಕೆಂದರೆ ಯಾವನ ಮೃತ್ಯುಲೇಖವನ್ನು ನಾನೇ ಬರೆದು ವೃತ್ತ ಪತ್ರಕ್ಕೆ ಕಳುಹಿದ್ದೆನೋ ಅದೇ ರಾಮರಾಯನು ನನ್ನೆದುರಿನಲ್ಲಿ ಕುಳಿತು ನನ್ನ ಕಡೆಗೆ ನೋಡುತ್ತ ನಸುನಗುತ್ತಿದ್ದನು. ನಾನು ಸ್ತಂಭಿತನಾದುದನ್ನು ಕಂಡು ಅವನೇ ಬಂದು “ಏಕೆ ರಾಯರೇ ಗುರುತು ಹತ್ತಲೊಲ್ಲದೊ ?” ಎಂದು ಮಾತಾಡಿಸಿದನು. ನಾನು ದಿಙ್ಮೂಢನಾದೆನು. ಕಳೆದ ಹದಿನಾರು ದಿನದಲ್ಲಿ ನನ್ನ ಕಣ್ಣಿಗೆ ಕಣ್ಣು ಹಚ್ಚಿ ನನ್ನನ್ನು ಯಾರೂ ಮಾತಾಡಿಸಿದ್ದಿಲ್ಲ; ಈ ಹೊತ್ತು ಇಷ್ಟು ಪ್ರೇಮದಿಂದ ಮಾತಾಡಿಸುವವನು ಭೆಟ್ಟಿಯಾದ್ದರಿಂದ ನನಗೆ ಆನಂದವಾಗತಕ್ಕದ್ದು ಸರಿ. ಆದರೆ ಭೆಟ್ಟಿಯಾದ ವ್ಯಕ್ತಿಯು ದಿವಂಗತನಾದ ರಾಮರಾಯನಾದ್ದರಿಂದ ನನ್ನ ಹೊಟ್ಟೆಯಲ್ಲಿ ತಣ್ಣಗಿನ ಕಲ್ಲು ಇಟ್ಟಂತಾಯಿತು. ಇಷ್ಟು ಮೈಮೇಲೆ ಬಿದ್ದು ಮಾತನಾಡಿಸುವವನನ್ನು ಬಿಟ್ಟುಬಿಡುವದೆಂದರೆ ಹೀನತನವೆಂದು ಭಾವಿಸಿ, ಮನಸ್ಸನ್ನು ಗಟ್ಟಿಮಾಡಿ “ಬರ್ರಿ ರಾಮರಾಯರೆ, ದೃಷ್ಟಿಯು ಸ್ವಲ್ಪ ಮಂದಾದ್ದರಿಂದ ಬೇಗನೆ ಗುರುತುಹತ್ತಲಿಲ್ಲ. ಕ್ಷಮಿಸಿರಿ” ಅಂದೆನು. ಅದೇನು ರಾಯರೇ ಕ್ಷಮಿಸುವದು ? ಎಂದು ರಾಮರಾಯನು ಅಂದನು ಹದಿನಾರು ದಿನಗಳವರೆಗೆ ನಾನು ಎಷ್ಟು ಚೀರಿದರೂ ನನ್ನ ಶಬ್ದವು ಯಾರಿಗೂ ಕೇಳಿಸಲಿಲ್ಲ. ಆದರೆ ರಾಮರಾಯರಿಗೆ ಹೇಗೆ ಕೇಳಿಸಿತು ? ಇದೇ ಒಂದು ಸೋಜಿಗವಾಯಿತು. ನನ್ನ ಕೂಡ ಮಾತಾಡುವವನು ಒಬ್ಬನಾದರೂ ಸಿಕ್ಕನೆಂದು ನನಗೆ ಆನಂದವಾಯಿತು. ಮತ್ತು ಆ ಆನಂದದಲ್ಲಿ ಮೊದಲು ಉಂಟಾದ ಭಯಮಾಯವಾಯಿತು ಇಷ್ಟಾದರೂ ರಾಮರಾಯನ ಸಂಗಡ ಕೇವಲ ಮೇಲುಪಚಾರದ, ಕ್ಷೇಮಸಮಾಚಾರದ ಮಾತುಗಳನ್ನೇ ಆಡಹತ್ತಿದೆನು.

ಆವನು ಮೃತಪಟ್ಟವನೆಂಬ ಭಾವನೆಯು ಇನ್ನೂ ನನ್ನ ಮನಸ್ಸನ್ನು ಬಿಟ್ಟಿದ್ದಿಲ್ಲ. ನಾನು ಹೀಗೆ ಅಂಜುತ್ತ ಅಂಜುತ್ತ ಮಾತಾಡುವದನ್ನು ಕಂಡು ರಾಮರಾಯರಿಗೆ ಸ್ವಲ್ಪ ಸಿಟ್ಟು ಬಂದಂತೆ ತೋರಿತು. “ಸಂಕೋಚವೇಕೆ? ಇತರರಂತೆ ನೀವಾದರೂ ನಾನು ಮೃತನೆಂದು ತಿಳಿಯುತ್ತೀದ್ದೀರಿ, ತಿಳಿಯಿರಿ, ನಾನು ಹೋಗುವೆನು” ಎಂದು ರಾಮರಾಯನು ಹೊರಟನು. ಸಿಕ್ಕವನೊಬ್ಬ ಮಿತ್ರನು ಕೈಬಿಟ್ಟು ಹೋಗುವನೆಂದು ಹತಾಶನಾಗಿ ನಾನು ಮಾತಾಡಿದೆನು. ಕೂತುಕೊಳ್ಳಿ ರಾಮರಾಯರೇ ಮಿಕ್ಕವರಂತೆ ನಾನಾದರೂ ತಾವು ಮೃತಪಟ್ಟವರೆಂದು ಭಾವಿಸಿದ್ದು ನಿಜ. ಆದರೆ ನನ್ನ ಭವಣೆಯನ್ನು ಕೇಳಿದರೆ ತಮಗೆ ನಿಜಸ್ಥಿತಿ ಗೊತ್ತಾಗುವದು. ರಾಮರಾಯನು ಕುಳಿತನು. ಕಳೆದ ಹದಿನಾರು ದಿನಗಳಲ್ಲಿ ನಾನು ಜೀವಂತ ಇರುವೆನೆಂದು ಸಿದ್ಧಮಾಡಲು ನಾನು ನಡಿಸಿದ ಪ್ರಯತ್ನಗಳು ಅದರಂತೆ ನನ್ನ ಇಷ್ಟಮಿತ್ರರು ನಾನು ಸತ್ತೆನೆಂದು ಕಲ್ಪಿಸಿ, ನನ್ನ ಅಸ್ತಿತ್ವದ ಬಗ್ಗೆ ತೋರಿಸಿದಔದಾಸೀನ್ಯ ಇವುಗಳನ್ನು ಸವಿಸ್ತಾರವಾಗಿ ರಾಮರಾಯನಿಗೆ ಹೇಳಿದೆನು. ಇದನ್ನೆಲ್ಲ ಕೇಳುವ ಮುಂದೆ ರಾಮರಾಯನ ನಗುತ್ತಿದ್ದನು. ನನ್ನ ಕತೆ ಮುಗಿದ ಮೇಲೆ ಸಹ ರಾಮರಾಯನು ನಗೆ ನಿಲ್ಲಲಿಲ್ಲ! ಕಡೆಗೆ ಸ್ವಲ್ಪ ನಿಂತ, ರಾಮರಾಯನು ಅಂದ: ಸಿಟ್ಟು ಮಾಡಬೇಡಿ. ತಮ್ಮ ದುರದೃಷ್ಟಿಗೆ ನಾನು ನಗುವೆನೆಂದು ತಿಳಿಯಬೇಡಿ. ಕೇವಲ ನಿಮ್ಮಂತೆಯೇ ನನ್ನದಾವದರೂ ಭವಣಿಯಾಗಿತ್ತು. ಆಗ ನಾನು ನಿಮ್ಮಂತೆಯೇ ನಿರಾಶನಾಗಿದ್ದೆನು. ಆದರೆ ಚಿಂತೆ ಇಲ್ಲ; ಬರ್ರಿ. ಎಂದು ರಾಮರಾಯನು ನನ್ನ ಕೈ ಹಿಡಿದು ಕರೆದುಕೊಂಡು ಒಂದು ಸ್ಥಳಕ್ಕೆ ಹೋದನು.

—

# ಗೋಪಾಳಭಟ್ಟರ ಹುಲಿ



ನಮ್ಮೂರಿಗೆ ಪುಣೆ ಮುಂಬೈ ಕಡೆಯಿಂದ ಅತಿಥಿಗಳು ಬಂದರೆ ನಿಜವಾಗಿಯೂ ನಮ್ಮ ಊರಿನ ಪರಿಸ್ಥಿತಿಯನ್ನು ಕಂಡು ಅವರಿಗೆ ಕನಿಕರವೆನಿಸದೇ ಇರುವದಿಲ್ಲ. ಐವಾರು ಸಾವಿರ ಜನವಸತಿ ನಮ್ಮೂರಿನದು. ಇತ್ತ ಹಳ್ಳಿಯೂ ಅಲ್ಲ, ಇತ್ತ ಪಟ್ಟಣವೂ ಅಲ್ಲ. ಆದರೆ ಹಳ್ಳಿಯ ಎಲ್ಲ ಅನಾನುಕೂಲತೆಗಳೂ ಪಟ್ಟಣದ ಎಲ್ಲ ತುಟಾಗ್ರತೆಯೂ ಇಲ್ಲಿ ಕೂಡಿಕೊಂಡಿವೆ. ಸುದ್ದಿ ಎನ್ನಬಹುದಾದ ಯಾವ ಸಂಗತಿಯೂ ಇಲ್ಲಿ ಘಟಿಸುವದಿಲ್ಲ. ಸಭೆ, ಮೆರವಣಿಗೆ, ಪರಿಷತ್ತು ಅಥವಾ ಕನಿಷ್ಟವಾಗಿ ಹೊಡೆದಾಟ ಬಡಿದಾಟಗಳು ಜರುಗಿದರೂ ಊರಿಗೊಂದು ಕಳೆಬರಬಹುದಾಗಿತ್ತು. ಅದರೆ ಅಂಥದೇನೂ ಘಟಿಸುತ್ತಿರಲಿಲ್ಲವಾದ್ದರಿಂದ, ಆಳಬಾವಿಯಲ್ಲಿರುವ ಆವೆಯಂತೆ ನಮ್ಮ ಆಯುಷ್ಯವು ಸಾಗಿದ್ದಿತು. ಆದರೆ ಆಗಾಗ್ಗೆ ಚಿಕ್ಕ ಪುಟ್ಟ ಘಟನೆಗಳೂ ಜರಗುತ್ತಿದ್ದವು. ಅವುಗಳನ್ನು ಹತ್ತು ಹನ್ನೆರಡು ವರುಷಗಳಾದರೂ ನಾವು ನೆನಪಿನಲ್ಲಿಡುತ್ತಿದ್ದೆವು. ಇಂತಹದೇ ಒಂದು ಘಟನೆ ನಮ್ಮ ಗೋಪಾಳಭಟ್ಟರ ಹುಲಿಯ ಕತೆಯಾಗಿದೆ.

ನಮ್ಮ ಊರಿಗೆ ಯಾವುದಾದರೂ ನಾಟಕ ಕಂಪನಿಗಳಾಗಲೀ, ಸರ್ಕಸ ಕಂಪನಿಗಳಾಗಲೀ ಬಂದುವೆಂದರೆ, ಅವು ತಮ್ಮ ಅಂತ್ಯವಿಧಿಗಾಗಿಯೇ ಬರುತ್ತವೆಂದು ನಮ್ಮೂರಿನ ಖ್ಯಾತಿ. ಒಮ್ಮೆ ಇಂತಹದೇ ಒಂದು ಚಿತ್ತಾಕರ್ಷಕ ಸರ್ಕಸ ಕಂಪನಿಯು ನಮ್ಮೂರಿಗೆ ಬಂದಿತು. ಮತ್ತು ಅವರು ತಮ್ಮ ತಂಬೂವನ್ನೂ ಹೊಡೆದರು. ತಂಬೂ ನಿಂತರೂ, ಒಲೆ ಉರಿ ಕಂಡಿದ್ದಿಲ್ಲ. ಸರ್ಕಸ ಕಂಪನಿಯಲ್ಲಿ ಆನೆ ಇತ್ತು; ಹುಲಿ ಇತ್ತು; ಮತ್ತು ಕದುರೆಗಳೂ ಇದ್ದವು; ಆದರೆ ಅಕ್ಕಿ ಮಾತ್ರ ಇರಲಿಲ್ಲ. ಮಾನೇಜರರು ಬಹಳ ಚಿಂತೆಯಲ್ಲಿ ಬಿದ್ದಿದ್ದರು. ಅವರಿಗೆ ಹಸಿವೆ ಬಹಳವಾಗಿತ್ತು. ಆದರೂ ಊರಾದರೂ ಹೇಗಿದೆ. ನೋಡಿಬರೋಣವೆಂದು, ಹಸಿದ ಹೊಟ್ಟೆಯಿಂದಲೇ ಹೊರಗೆ ಹೊರಟರು. ಒಂದೆರಡು ಮನೆ ದಾಟುವಷ್ಟರಲ್ಲಿ ಅವರಿಗೆ ಗೋಪಾಳಭಟ್ಟರ ದರ್ಶನವಾ

ಯಿತು. ಗಣಪತಿಯನ್ನೂ ನಾಚಿಸುವ ಅವರ ಹೊಟ್ಟೆಯನ್ನೂ, ಗಡ್ಡಮೀಸೆಗಳ ಅರಣ್ಯದಲ್ಲಿ ಅಡಗಿದ ಅವರ ಬಾಯಿಯನ್ನೂ, ಮತ್ತು ಬಚ್ಚಲ ಮನೆಯಲ್ಲಿ ಸ್ನಾನಕ್ಕೆ ಕೂತವರಂತೆ ಕೂತ ಅವರ ರೀತಿಯನ್ನೂ ನೋಡಿ, ಮ್ಯಾನೇಜರರ ಮನಸ್ಸಿನಲ್ಲಿ ಪೂಜ್ಯಭಾವನೇ ಉತ್ಪನ್ನವಾಯಿತು. ವಿಶೇಷವಾಗಿ ಗೋಪಾಳ ಭಟ್ಟರು ಕಿರಾಣಿ ಅಂಗಡಿಯ ವ್ಯಾಪಾರಿಗಳಾಗಿದ್ದರು. ಮತ್ತು ಅವರು ಆವಾಗ ತಮ್ಮ ಅಂಗಡಿಯಲ್ಲಿಯೇ ಕುಳಿತಿದ್ದರು. ಅಂತೆಯೇ ಮ್ಯಾನೇಜರರ ಪೂಜ್ಯ ಭಾವನೆಗೆ ಉಕ್ಕು ಬಂದಿತು. ಅವರು ಬಾಗಿ ಭಟ್ಟರಿಗೆ ನಮಸ್ಕಾರ ಮಾಡಿದರು.

ವೇಷದಿಂದ ನೋಡಿದರೆ ಪೆನ್ಶನ್ ತೆಗೆದುಕೊಂಡ ಪೋಲೀಸಇನ್‌ಸ್ಪೆಕ್ಟರರಂತೆ ಕಾಣುವ ಡೌಲಿನ ಒಬ್ಬ ಗೃಹಸ್ಥನು ತಮಗೆ ನಮಸ್ಕಾರ ಮಾಡುವದನ್ನು ಕಂಡು, ಗೋಪಾಳ ಭಟ್ಟರಿಗೆ ಆಶ್ಚರ್ಯವೆನಿಸಿತು; ಒಂದಿಷ್ಟು ಸಂತೋಷವೂ ಆಯಿತು. ಅವರು ನಗುನಗುತ್ತ ಮ್ಯಾನೇಜರರನ್ನು ಸ್ವಾಗತಿಸಿದರು.

ಮ್ಯಾನೇಜರರು ತಮ್ಮ ಸರ್ಕಸಿನ ವಿಷಯಕ್ಕೆ ಹೇಳಿ, ತಮ್ಮ ಮುಕ್ಕಾಮು ಈಊರಿನಲ್ಲಿ ಇರುವ ವರೆಗೆ, ಉತ್ತಮ ಪ್ರಕಾರದ ಕಿರಾಣೀ ಸಾಮಾನುಗಳನ್ನು ಪೂರೈಸುವ ಒಬ್ಬ ಖರೇ ವರ್ತಕರು ತಮಗೆ ಬೇಕಾಗಿದ್ದಾರೆ ಎಂದು ಹೇಳಿದರು. ಇಂಥ ದೊಡ್ಡ ಗಿರಾಕಿಯು ಅನಾಯಾಸವಾಗಿ ನಡೆಯುತ್ತ ತಮ್ಮ ಕಡೆಗೇ ಬಂದದ್ದನ್ನು ಕಂಡು ಗೋಪಾಳಭಟ್ಟರಿಗೆ ಸಂತೋಷವೆನಿಸಿತು- ಮ್ಯಾನೇಜರರು ಆಗಾವ ಪಣ ಕೊಡಬೇಕೇ? ಎಂದು ಕೇಳಿದರು. ಈ ಹೊಸ ಗಿರಾಕಿಯನ್ನು ಸಂತೋಷಗೊಳಿಸುವದೇ ಜಾಣತನವೆಂದು ತಿಳಿದು, ಗೋಪಾಳ ಭಟ್ಟರು ಆಗಾವ ಹಣವನ್ನು ಸ್ವೀಕರಿಸಲು ನಿರಾಕರಿಸಿದರು ಮ್ಯಾನೇಜರರಿಗೂ ಇದೇ ಬೇಕಾಗಿತ್ತು. ಚಿತ್ತಾಕರ್ಷಕ ಕಂಪನಿಯ ಒಲೆ ಹೊತ್ತಿತು. ಹುಡುಗರನ್ನು ಹಿಡಿದು ಹಿರಿಯರ ವರೆಗೆ, ಆಡಿನಿಂದ ಆನೆಯ ವರೆಗೆ ಆನಂದವೇ ಆನಂದ ಪಸರಿಸಿತು.

ಗೋಪಾಳಭಟ್ಟರ ಚೌರ ಹಾರಾಡಹತ್ತಿತು. ಅವರಿಗೆ ಸರ್ಕಸ್ಸಿಗೆ ಹೋಗಲಿಕ್ಕೆ ಯಾವಾಗಲೂ ಮುಕ್ತದ್ವಾರವಿದ್ದಿತು. ಅಲ್ಲದೇ ಮನೆಯ ಮಂಡಳಿಗೂ ಕುರ್ಚಿಯ ಫುಕ್ಕಟೆ ಪಾಸುಗಳು ಇದ್ದವು. ಒಂದೆರಡು ದಿವಸಗಳಲ್ಲಿ

ಸರ್ಕಸಿನ ನಾಯಿಗಳೂ ಕೂಡ ಗೋಪಾಳಭಟ್ಟರನ್ನು ಕಂಡ ಕೂಡಲೆ ಬಾಲ ಅಲ್ಲಾಡಿಸಹತ್ತಿದವು. ನಿಜವಾಗಿ ನೋಡಿದರೆ, ಮೂಕ ಪ್ರಾಣಿಗಳಿಂದಲೂ ತಮಗೆ ಇಂತಹ ಮರ್ಯಾದೆ ಸಿಗುತ್ತಿರುವಾಗ, ಗೋಪಾಳಭಟ್ಟರ ಮನಸ್ಸು ಆನಂದಸಾಗರದಲ್ಲಿ ಈಸಾಡಬೇಕಾಗಿತ್ತು. ಆದರೆ ಹಾಗೇನೂ ಇರದೆ, ಅವರ ಮನಸ್ಸಿನಲ್ಲಿ ಒಂದು ತರದ ಡುಗು ಡುಗಿ ಇದ್ದಿತು. ಸರ್ಕಸ್ಸಿನಲ್ಲಿ ಕುರ್ಚಿಯ ಮೇಲೆ ಕುಳಿತುಕೊಳ್ಳುವ ಒಬ್ಬಿಬ್ಬರು ಗೃಹಸ್ಥರನ್ನು ಮಾತನಾಡಿಸುವ ಪ್ರಸಂಗವೂ ಇವರಿಗೆ ಬಂದಿತು. ಆದರೆ ಅವರೆಲ್ಲರೂ ಮುಖ್ಯವಾಗಿ ಪುಕ್ಕಟೆಯಾಗಿಯೇ ಬಂದವರಾಗಿದ್ದರು. ಪೋಲೀಸ ಅಧಿಕಾರಿಗಳೂ, ಮಾಮಲೇದಾರ ಇತ್ಯಾದಿ ಅಮಲದಾರರೂ ಮತ್ತು ಅವರ ಮನೆಯ ಮಂಡಲಿಯವರೇ ಈ ಕುರ್ಚಿಗಳನ್ನು ಅಲಂಕರಿಸುತ್ತಿರುವದನ್ನು ಕಂಡು ಭಟ್ಟರಿಗೆ ತಮ್ಮ ಬಾಕಿ ವಸೂಲಿಯ ಚಿಂತೆ ಹತ್ತಿತು.

ಇಂಥ ಚಿಂತಾಕ್ರಾಂತ ಸ್ಥಿತಿಯಲ್ಲಿ ಒಂದು ದಿವಸ ಗೋಪಾಳಭಟ್ಟರು ತಮ್ಮ ಚಿರಂಜೀವನಾದ ವಿಠ್ಠಲನನ್ನು ಕರೆದುಕೊಂಡು ಬಾಕೀ ಕೇಳಲಿಕ್ಕೆಂದು ಮ್ಯಾನೇಜರರ ಕಡೆಗೆ ಹೋದರು. ಆಗ ಮ್ಯಾನೇಜರ ಸಾಹೇಬರು ಆನೆಗೆ ಏನನ್ನೋ ಕಲಿಸುವುದರಲ್ಲಿ ಮಗ್ನರಾಗಿದ್ದರು. ಅವರು ಗೋಪಾಳಭಟ್ಟರಿಗೆ ದೂರದಿಂದಲೇ ನಮಸ್ಕಾರ ಮಾಡಿದರು. ಮತ್ತು ತಂದೆ ಮಕ್ಕಳು ಸಮೀಪಕ್ಕೆ ಬರುತ್ತಲೇ ಥಟ್ಟನೇ ಮಗುವನ್ನೆತ್ತಿ ಮಾವುತನ ಕೈಯಲ್ಲಿ ಕೊಟ್ಟರು. ಆನೆಯ ಮೇಲೆ ವಿರಾಜಮಾನನಾಗಿರುವ ವಿಠ್ಠಲನನ್ನು ಕಂಡು ಭಟ್ಟರು ಹಿಗ್ಗಿ ಹೋದರು. ಮುಂದೆ ವಿಠ್ಠಲನ ಮನಸ್ಸು ತಿರುಗಿಸಿ ಕೆಳಗಿಳಿಸಬೇಕಾದರೆ ಭಟ್ಟರಿಗೆ ಸಾಕುಬೇಕಾಯಿತು ಈ ಗದ್ದಲದಲ್ಲಿ ಬಾಕೀ ಕೇಳುವ ನೆನಪು ಕೂಡ ಭಟ್ಟರಿಗೆ ಉಳಿಯಲಿಲ್ಲ. ಈ ರೀತಿಯಾಗಿ ಸರ್ಕಸಿನ ಮೇಲಿನ ದೊಡ್ಡ ಸಂಕಟವು ಅನಾಯಾಸವಾಗಿ ತಪ್ಪಿತು.

ಚಿತ್ತಾಕರ್ಷಕ ಸರ್ಕಸ ಮಂಡಲಿಯವರು ನಮ್ಮೂರಿಗೆ ಬಂದು ೧೫ ದಿವಸಗಳಾದವು. ಸರ್ಕಸಿನ ಉತ್ಪನ್ನ ಮತ್ತು ವೆಚ್ಚ ಇವು ಎಂದೂ ಬಾಯಿಗೂಡುತ್ತಿರಲಿಲ್ಲ. ಇಂಥ ಹೊತ್ತಿನಲ್ಲಿಯೇ "ನಾಳಿನಿಂದ ಉದ್ರಿ ಬಂದು" ಎಂಬ ನೋಟೀಸನ್ನು ಭಟ್ಟರು ಕೊಟ್ಟರು. ಮ್ಯಾನೇಜರರಿಗೆ ಸರ್ಕಸ್ಸನ್ನು ಕಿತ್ತುದ ಹೊರತು ಬೇರೊಂದು ಉಪಾಯವೇ ಉಳಿಯಲಿಲ್ಲ.

ಬಾಡಿಗೆಯ ಬಂಡಿಗಳಲ್ಲಿ ಸರ್ಕಸಿನ ಸಾಮಾನುಗಳನ್ನು ಹೇರುತ್ತಿರುವದನ್ನು ಕಂಡು ಗೋಪಾಳಭಟ್ಟರು ಯಮದೂತರ ಹಾಗೆ ಮ್ಯಾನೇಜರರ ಮುಂದೆ ಬಂದು ನಿಂತರು. "ಮುಂದಿನ ಊರಿನ ಉತ್ಪನ್ನದಿಂದ ತಮ್ಮ ಬಾಕಿ ತೀರಿಸುತ್ತೇನೆ" ಎಂದು ಮ್ಯಾನೇಜರರು ಹೇಳಹತ್ತಿದರು. ಆದರೆ ಭಟ್ಟರು ಒಳ್ಳೇ ಆಸಾಮಿ ಗಂಟು ಬಿದ್ದರು. ಅವರು ಇಂಥ ಗುಳಿಗೆಗಳಿಗೆ ಮೋಸ ಹೋಗುವವರಿರಲಿಲ್ಲ, ತಮ್ಮ ಎರಡುನೂರು ರೂಪಾಯಿಗಳನ್ನು ಎಣಿಸದ ಹೊರತು ಗಾಡಿಗಳನ್ನು ಮುಂದೆ ಹೋಗಗೊಡುವದಿಲ್ಲವೆಂದು ಭಟ್ಟರು ಸ್ಪಷ್ಟ ಯೇಳಿಬಿಟ್ಟಿದ್ದರು. "ನಮ್ಮ ಹತ್ತಿರ ಹಣವಿಲ್ಲ. ಬೇಕಾದರೆ ಹಣಕ್ಕಾಗಿ ಏನಾದರೂ ಸಾಮಾನುಗಳನ್ನು ಒತ್ತೆ ಇಟ್ಟುಕೊಳ್ಳರಿ" ಎಂದು ಮ್ಯಾನೇಜರರು ಹೇಳಿದರು. ಗೋಪಾಳಭಟ್ಟರಿಗೆ ವಿಚಾರಿಸುವುದಕ್ಕೆ ಸಮಯವೇ ಇರಲಿಲ್ಲ. ಅವರು ನಿಂತ ನಿಂತಲ್ಲಿಯೇ ನಿಶ್ಚಯ ಮಾಡಿದರು. ತಮ್ಮಕಡೆಗೆ ಹುಲಿಯನ್ನು ಒತ್ತೆ ಇಟ್ಟರೆ ಮಾತ್ರ ಉಳಿದ ಗಾಡಿಗಳನ್ನು ಮುಂದೆ ಬಿಡುವುದಾಗಿ ಬಜಾಯಿಸಿದರು ಮ್ಯಾನೇಜರರು ಬೇಕಾದಷ್ಟು ಅತ್ತು ಕರೆದು ಹೇಳಿಕೊಂಡರೂ ಗೋಪಾಳಭಟ್ಟರ ಮನಸ್ಸು ಕರಗಲಿಲ್ಲ. ಸರ್ಕಸಿನಲ್ಲಿ ಹುಲಿಯ ಕೆಲಸವೇ ಮಹತ್ವದ್ದಿರುವುದರಿಂದ ಮ್ಯಾನೇಜರರು ಶಕ್ಯವಿದ್ದಷ್ಟು ತೀವ್ರ ಬಾಕಿ ತೀರಿಸಿ, ಹುಲಿ ಬಿಡಿಸಿಕೊಂಡು ಹೋಗುವರೆಂದು ಭಟ್ಟರು ತರ್ಕಿಸಿ, ಹುಲಿಯ ಬಂಡಿಗೇ ಗಂಟುಬಿದ್ದರು. ಪಾಪ ಮ್ಯಾನೇಜರರಿಗೆ ಇನ್ನೊಂದು ಉಪಾಯವೇ ಉಳಿಯಲಿಲ್ಲ. ಅವರು ಹುಲಿಯ ಪಂಜರವನ್ನು ಗೋಪಾಳಭಟ್ಟರ ಸ್ವಾಧೀನಪಡಿಸಿ ಮುಂದಿನ ಊರಿನ ದಾರಿ ಹಿಡಿದರು.

ಹುಲಿಯ ಪಂಜರವು ಮನೆಯ ತಲೆಬಾಗಿಲಿನಿಂದ ಹಾಯ್ದು ಅಂಗಳದಲ್ಲಿ ಹೋಗುವಂತೆ ಇರದ್ದರಿಂದ, ಮನೆಯ ಹೊರಗೆ, ಕಟ್ಟೆಯ ಮೇಲೆಯೇ ಪಂಜರವನ್ನು ಇಡಬೇಕಾಯಿತು. ತಮ್ಮ ಬಾಕಿ ಕೊಡದೆ ರಕ್ಕಿಸಿ ಹೋಗುವ ಮ್ಯಾನೇಜರರನ್ನೇ ತಾವು ಮೀರಿಸಿದೆವೆಂದು ಭಟ್ಟರು ಒಳಗಿಂದೊಳಗೇ ನಗುತ್ತಿದ್ದರು. ಈ ಹಿಗ್ಗಿನ ಭರದಲ್ಲಿ ಅಂದು ಅವರಿಗೆ ಅಂಗಡಿಯ ನೆನಪು ಕೂಡ ಆಗಲಿಲ್ಲ. ಬಲಗಡೆಯ ಕಟ್ಟೆಗೆ ಹುಲಿಯ ಪಂಜರ, ಎಡಗಡೆಯ ಕಟ್ಟೆಗೆ ಗೋಪಾಳಭಟ್ಟರು ಈ ಜೋಡಿ ಸಂಜೆಯವರೆಗೆ ಕಾಣುತ್ತಿದ್ದಿತು. ಸಂಜೆಗೆ ಅಡವಿಗೆ ಹೋದ ಭಟ್ಟರ ಆಕಳು ತಿರುಗಿ ಮನೆಗೆ ಬಂದಿತು. ಆದರೆ ದೂರ

ದಿಂದಲೇ ಹುಲಿಯ ವಾಸನೆ ಹತ್ತಿ ಆಕಳು ಹಿಂದಿನಿಂದಲೇ ತಿರುಗಿ ಓಡಿ ಹೋಯಿತು. ಏಕಾಗ್ರಚಿತ್ತರಾಗಿ ಹುಲಿಯನ್ನೇ ನೋಡುತ್ತ ಕುಳಿತ ಭಟ್ಟರ ಲಕ್ಷವು ಈಗ ಇತರ ವಿಷಯಗಳ ಕಡೆಗೆ ಹೊರಳಿತು. ಅವರು ಅವಸರದಿಂದ ಧೋತರವನ್ನು ಸಂಭಾಳಿಸುತ್ತ ಆಕಳ ಹಿಂದೆ ಧಾವಿಸಿದರು. ಆದರೆ ತನ್ನ ಜೀವ ಉಳಿಸಿಕೊಳ್ಳಲು ಓಡುವ ಆಕಳ ವೇಗಕ್ಕೂ, ತಮ್ಮ ಹೊಟ್ಟೆ ಸಂಭಾಳಿಸಿ ಕೊಂಡು ಓಡುವ ಭಟ್ಟರ ವೇಗಕ್ಕೂ ಮಹದಂತರವಾದ್ದರಿಂದ ಭಟ್ಟರಿಗೆ ಆಕಳು ಸಿಕ್ಕಲಿಲ್ಲ.

ಭಟ್ಟರು ತಿರುಗಿದರು. ಆದರೆ ಮನೆಯ ಮುಂದೆ ಓಣಿಯ ಹುಡುಗರ ಬಾಜಾರವೇ ನೆರದಿತ್ತು. ಆಕಳನ್ನು ಕಂಡಾಗಿನಿಂದ ಹುಲಿಯು ಒಂದೇಸವನೇ ಗರ್ಜಿಸುತ್ತ ಪಂಜರದಲ್ಲಿ ಸುತ್ತಾಡುತ್ತಿತ್ತು. ಹುಡುಗರಿಗೆ ಇದೊಂದು ಮೌಜೇ ಆಗಿತ್ತು. ಅವರು ಸಣ್ಣ ಸಣ್ಣ ಹರಳು ಒಗೆಯಹತ್ತಿದರು. ಇದರಿಂದ ಹುಲಿ ಮತ್ತಷ್ಟು ರೇಗಿತ್ತು. ಭಟ್ಟರು ತಿರುಗಿ ಬರುತ್ತಲೇ ಹುಡುಗರು ಚದುರಿದರು. ಭಟ್ಟರು ಆಕಳನ್ನು ಹುಡುಕಲಿಕ್ಕೆ ಒಂದು ಆಳು ಕಳಿಸಿದರು. ಮತ್ತು ಇನ್ನೊಂದು ಆಕಳನ್ನು ಹುಲಿಯ ಪಂಜರದ ಪಹರೇ ಮಾಡಲಿಕ್ಕಿಟ್ಟರು. ತಾವು ಸ್ವತಃ ಹುಲಿಯ ಸಂಜೆಯ ಫಲಾಹಾರದ ವ್ಯವಸ್ಥೆಗೆ ನಿಂತರು. ಕಟಿಕರ ಅಂಗಡಿಗೆ ಹೋಗಿ, ಅವರ ಸಲಹೆಯಂತೆಯೇ ಅವರ ಆಳಿನ ಕಡೆಯಿಂದಲೇ ನಾಲ್ಕೈದು ಸೇರು ಆಡಿನ ಮಾಂಸವನ್ನು ತರಿಸಿ ಪಂಜರದಲ್ಲಿ ಹಾಕಿಸಿದರು. ಹುಲಿರಾಯನ ವ್ಯವಸ್ಥೆಯಾದ ನಂತರ ಭಟ್ಟರು ಊಟ ಮಾಡಿ ಮಲಗಿದರು.

ಮರುದಿವಸ ಒಂದು ಹೊಸ ಸಮಸ್ಯೆಯೇ ಉಪಸ್ಥಿತವಾಯಿತು. ಮೊದಲಿನಿಂದಲೂ ಹುಲಿಯ ಪಂಜರದಿಂದ ಉಗ್ರವಾದ ದುರ್ವಾಸನೆ ಬರುತ್ತಿತ್ತು. ಆದರಲ್ಲಿ ಕೊಳೆತ ಮಾಂಸದ ಮತ್ತು ಹುಲಿಯ ಮಲ ಮೂತ್ರದ ವಾಸನೆ ಕೂಡಿದ್ದರಿಂದ ಆ ಓಣಿಯಲ್ಲೆಲ್ಲ ದುರ್ವಾಸನೆ ತುಂಬಿಹೋಯಿತು. ಗೋಪಾಳ ಭಟ್ಟರ ಮನೆಗೆ ಭಿಕ್ಷುಕರು ಕೂಡ ಬರದಂತಾಯಿತು ಅಪ್ಪಿ ತಪ್ಪಿ ಕಾವಲುಗಾರರ ಕಣ್ಣು ತಪ್ಪಿಸಿ ಕಲ್ಲು ಒಗೆಯಲಿಕ್ಕೆ ಹುಡುಗರು ಮಾತ್ರ ಬರುತ್ತಿದ್ದರು. ಈ ದುರ್ವಾಸನೆಗಾಗಿ ಓಣಿಯ ಜನರಿಂದ ತಕರಾರು ಬರಹತ್ತಿತು. ಆದರೂ ಭಟ್ಟರು ಇದಕ್ಕೆ ಕಿವಿಗೊಡಲಿಲ್ಲ.

ಮೂರನೇ ದಿವಸ ಭಟ್ಟರ ಧರ್ಮಪತ್ನಿಯೂ ನೋಟಿಸು ಕೊಟ್ಟಳು. ಪಾಪ ಅವಳಿಗೆ ಹಗಲು-ರಾತ್ರಿ ಮನೆಯಲ್ಲಿಯೇ ಇರಬೇಕಾದ್ದರಿಂದ ಹುಲಿಯ ದುರ್ವಾಸನೆ ಅಸಹ್ಯವಾಗಿತ್ತು. ಇತ್ತ ಹುಲಿಗೆ ಏನು ಅನಿಸಿತ್ತೋ ದೇವರೇ ಬಲ್ಲ !! ಹುಲಿಯು ಆ ದಿವಸ ಏನೂ ತಿನ್ನಲಿಲ್ಲ. ಕೇವಲ ಪಂಜರದ ಒಂದು ಮೂಲೆಯಲ್ಲಿ ಬಿದ್ದುಕೊಂಡಿತ್ತು. ಭಟ್ಟರ ಮನಸ್ಸು ಚಂಚಲವಾಯಿತು. ಮನೆಯಿಂದಲೂ, ಓಣಿಯ ಜನರಿಂದಲೂ ತಕರಾರುಗಳಂತೂ ನಡೆದೇ ಇದ್ದವು. ಇತ್ತ ಹುಲಿಯಂತೂ ಅನ್ನಸತ್ಯಾಗ್ರಹವನ್ನೇ ಪ್ರಾರಂಭಿಸಿತ್ತು. ಈ ಗೊಂದಲದಲ್ಲಿ ಹುಲಿಯ ಜೀವಕ್ಕೆ ಏನಾದರೂ ಹೆಚ್ಚು ಕಡಿಮೆಯಾದರೆ ಮುಂದೇನು ? ಎಂಬ ಪ್ರಶ್ನೆ ಭಟ್ಟರ ಮುಂದೆ ನಿಂತಿತು. ತಮ್ಮ ಬಾಕೀ ಬರುವದಂತೂ ದೂರೇ ಉಳಿಯಿತು. ತಿರುಗಿ ಮ್ಯಾನೇಜರರಿಗೆ ಮತ್ತೊಂದು ಹೊಸ ಹುಲಿಯನ್ನೇ ತಂದು ಕೊಡಬೇಕಾದೀತು ! ಇಷ್ಟರಿಂದಲೇ ಬಗೆ ಹರಿಯುಲಿಕ್ಕಿಲ್ಲ. ಸರ್ಕಸ ಮಾಡುವ ಹುಲಿಯೇ ಬೇಕು ಎಂದು ಮ್ಯಾನೇಜರನು ಹಟ ಹಿಡಿದರೆ ಮಾಡುವುದೇನು ? ಈ ಎಲ್ಲ ವಿಚಾರಗಳನ್ನು ಮಾಡಿ, ಅಂದು ಭಟ್ಟರಿಗೆ ಚಹ ಕೂಡ ರುಚಿ ಹತ್ತಲಿಲ್ಲ. ಈ ಅವಧಿಯಲ್ಲಿ ಭಟ್ಟರ ಕೈಯಿಂದ ೫-೬ ರೂಪಾಯಿಗಳೂ ಕೈ ಬಿಟ್ಟಿದ್ದವು. ಇನ್ನು ಹುಲಿಯ ಔಷಧೋಪಚಾರಕ್ಕಾಗಿ ಹಣ ಖರ್ಚು ಮಾಡುವ ಪ್ರಸಂಗ ಬಂದಿತು.

ಗೋಪಾಳಭಟ್ಟರ ಓಡಾಟ ಸುರುವಾಯಿತು. ಅವರಿಗೆ ಬಾಡಿಗೆ ಬಂಡಿ ಸಿಗುವದು ಕೂಡ ಕಠಿಣವಾಯಿತು. ನಿತ್ಯದ ಬಾಡಿಗೆಯ ಮೂರುಪಟ್ಟು ಬಾಡಿಗೆ ಕೊಟ್ಟು ಭಟ್ಟರು ಒಂದು ಗಾಡಿ ಮಾಡಿ, ಸಮೀಪದ ಊರಲ್ಲಿಯೇ ಇರುವ ಸರ್ಕಸ ಕಂಪನಿಗೆ ಹುಲಿರಾಯನನ್ನು ಮುಟ್ಟಿಸಿ ತಿರುಗಿ ಬಂದರು. ಅಂದಿನಿಂದ ನಮ್ಮ ಭಟ್ಟರು ಮೊಹರಮ್ಮದ ಹುಲಿಯನ್ನು ಕಂಡರೂ ರೇಗುತ್ತಾರೆ. ಮತ್ತು ಸರ್ಕಸ ಎಂದರೆ ಬಯ್ಯಲಿಕ್ಕೆ ಪ್ರಾರಂಭಿಸುತ್ತಾರೆ.

# ಎಚ್ಚರಿಕೆ

★

ಅಲಂಕಾರವು ಕೀಳಾದರೆ ತಪ್ಪಿದಾತನು ಸೊನಗಾರ
ಭಂಗಾರದ್ದೇನು ತಪ್ಪು ?
ಮೂರ್ತಿ ಕೆಟ್ಟರೆ ದೋಷಕ್ಕೆ ಗುರಿ ಚಿತ್ರಗಾರ
ಮಣ್ಣೇನು ಮಾಡೀತು ?
ಮನೆ ಡೊಂಕಾದರೆ ಕೆಡಿಸಿದವನು ಉಪ್ಪಾರ
ಕಟ್ಟೇನು ಮಾಡ್ಯಾವು ?
ನಾನು ಗುಣಹೀನನಾದರೆ, ದೇವಾ
ನೀನು ಹೊಣೆಗಾರನು.

ಒಬ್ಬ ಸೊನಗಾರ ಕೆಲಸ ಕೆಡಿಸಿದರೆ ಮತ್ತೊಬ್ಬ ದೊರೆಯುವನೆಂದು ಜನರಿಗೆ ನಂಬಿಕೆ. ಆದರೆ ಸೃಷ್ಟಿಕರ್ತನು ಬೀದಿ–ಬೀದಿಗೆ ದೊರಕುವದುಂಟೆ ? ದೇವಾ ನೀ ಮಾಡಿದ ತಪ್ಪನ್ನು ಮತ್ತಾರು ತಿದ್ದುವರು ? ಜೀವಿಗಳನ್ನು ನಿರ್ಮಿಸುವಾಗ್ಗೆ ಎಚ್ಚರಿರಬೇಡವೆ ? ನನ್ನಂಥ ಪಾಮರರನ್ನು ಜನಿಸಿಸಿ ನಿನ್ನ ಹೆಸರಿಗೆ ನೀನೇ ಕುಂದು ತಗಲಿಸುವದುಚಿತವೆ ?

ಕುಂಬಾರನಿಂದ ಒಡಕ ಗಡಿಗೆಗಳನ್ನಾರೂ ಕೊಳ್ಳುವದಿಲ್ಲ. ಕೊಳಕು ಹಣ್ಣುಗಳು ಮಾರಾಟವಾಗುವದಿಲ್ಲ. ಒಡಕ ಗಡಿಗೆಗಳು ತಿರುಗಿ ಕುಂಬಾರನ ಮನೆಗೇ ಹೋಗುವವು. ಎಲೈ ಭವಚಕ್ರನಾಡಿಸುವ ಕುಂಬಾರನೇ ! ನನ್ನಂಥ ನಿರ್ಗುಣಿಗಳು ತಿರುಗಿ ನಿನ್ನೆಡೆಗೆಯೇ ಬರುವರು ಎಚ್ಚರಿಕೆ.

ನನ್ನ ಪೂರ್ವ ಕರ್ಮದ ಫಲವೆಂದು ನೀನು ದೋಷ ತಪ್ಪಿಸಲು ಯತ್ನಿಸಬಹುದು. ಆದರೆ ಪೂರ್ವ ಕರ್ಮವನ್ನಾದರೂ ಮಾಡಿಸಿದವರಾರು ?